| 1 | 2 | 3 | 4 |
|---|---|---|---|
| 15 | ಗ್ರೂಪ್ 'ಡಿ' | 5 | ಹಾಲಿ ಖಾಲಿ ಇರುವ 7 ಗ್ರೂಪ್ 'ಡಿ' ಹುದ್ದೆಗಳನ್ನು ತಕ್ಷಣದಿಂದ ರದ್ದುಪಡಿಸಲು ಹಾಗೂ ಮುಂದೆ ಖಾಲಿಯಾಗುವ ಗ್ರೂಪ್ 'ಡಿ'ಹುದ್ದೆಗಳನ್ನು ಸಹ ರದ್ದುಪಡಿಸಲು ಹಾಗೂ ಗ್ರೂಪ್ 'ಡಿ' ವೃಂದದಲ್ಲಿ ಬೇಕಾಗುವ ಸೇವೆಯನ್ನು ಇನ್ನು ಮುಂದೆ ಬಾಹ್ಯ ಮೂಲಗಳಿಂದ ಪಡೆಯತಕ್ಕದ್ದೆಂದು ಅಧಿಕಾರಿಯುತ ಸಮಿತಿಯು ನಿರ್ಣಯಿಸಿರುತ್ತದೆ. ಪ್ರಸ್ತುತ 5 ಗ್ರೂಪ್ 'ಡಿ' ಹುದ್ದೆಗಳನ್ನು ಮಾತ್ರ ರದ್ದುಪಡಿಸಿದೆ. ಉಳಿದ ಎರಡು ಗ್ರೂಪ 'ಡಿ' ಹುದ್ದೆಗಳ ಕುರಿತು ಬೇರೆ ಪ್ರಕ್ರಿಯೆ ಪ್ರಾರಂಭಿಸಲಾಗುವುದು. |

**ಷರತ್ತುಗಳು:**

1. ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯಕ್ಕೆ ಸಂಬಂಧಿಸಿದಂತೆ ಅನುಬಂಧ-ಎ ರಲ್ಲಿ ಸೃಜಿಸಲಾದ ಹುದ್ದೆಗಳನ್ನು ಹೊರತುಪಡಿಸಿ, ವಿವಿಧ ಇಲಾಖೆಗಳ ಅವಶ್ಯಕತೆಗೆ ನಿಯೋಜನೆಯ ಮೇರೆಗೆ ನೇಮಕ ಮಾಡುವ ಸಲುವಾಗಿ ಯೋಜನೆ ಇಲಾಖೆಯ ಪ್ರತ್ಯೇಕವಾಗಿ ಸೃಜಿಸಿರುವ ನಿಯೋಜನೆ ಹುದ್ದೆಗಳ ಬಗ್ಗೆ ವಿವರಗಳನ್ನು ಅನುಬಂಧ-ಬಿ ರಲ್ಲಿ ನೀಡಲಾಗಿದೆ. ಈ ಒಟ್ಟು 862 ಹುದ್ದೆಗಳನ್ನು ವಿವಿಧ ಇಲಾಖೆಗಳ ಕಾರ್ಯನಿರ್ವಹಣೆಗೆ ಅತ್ಯವಶ್ಯಕ ಹುದ್ದೆಗಳಾಗಿರುವುದರಿಂದ, ಹಾಗೂ ಈ ಹುದ್ದೆಗಳಿಗೆ ತಗಲು ವೆಚ್ಚವನ್ನು ಎರವಲು ಪಡೆಯುವ ಇಲಾಖೆಗಳು ಭರಿಸುವುದರಿಂದ, ಅನುಬಂಧ-ಬಿ ರಲ್ಲಿ ನಿಯೋಜನೆಗಾಗಿ ನಿಗದಿಪಡಿಸಿರುವ ಒಟ್ಟು 862 ಹುದ್ದೆಗಳ ಪೈಕಿ ಯಾವುದೇ ಖಾಲಿ ಹುದ್ದೆಗಳನ್ನು ರದ್ದುಪಡಿಸುವ ಅವಶ್ಯಕತೆ ಇಲ್ಲವೆಂದು ನಿರ್ಣಯಿಸಿದೆ. (ತಾಲ್ಲೂಕು ಯೋಜನಾ ಘಟಕಗಳಿಗೆ ಸೂಚಿಸಿರುವ 43 ಹುದ್ದೆಗಳನ್ನು ಹೊರತುಪಡಿಸಿ).
2. ಇನ್ನು ಮುಂದೆ, ಡಿ ವೃಂದದ ಹುದ್ದೆಗಳನ್ನು ಹೊರತುಪಡಿಸಿ, ಇತರೆ ಎಲ್ಲಾ ವೃಂದಗಳಿಗೆ ನೇಮಕಾತಿಗಾಗಿ ನಿಗದಿಪಡಿಸಲಾದ ವಿದ್ಯಾರ್ಹತೆಗಳ ಜೊತೆಗೆ ಗಣಕ ಯಂತ್ರದಲ್ಲಿ ಕನಿಷ್ಟ ಅರ್ಹತೆ ಕೂಡ ಕಡ್ಡಾಯಗೊಳಿಸಬೇಕು. ಶೀಘ್ರಲಿಪಿಗಾರರ ಹುದ್ದೆಗಳನ್ನು ಶೀಘ್ರಲಿಪಿಗಾರ-ಕಮ್- ಗುಮಾಸ್ತ ಎಂದು ಹಾಗೂ ಬೆರಳಚ್ಚುಗಾರರ ಹುದ್ದೆಯನ್ನು ಬೆರಳಚ್ಚುಗಾರರ-ಕಮ್-ಗುಮಾಸ್ತ ಎಂದು ಪರಿವರ್ತಿಸಿಕೊಳ್ಳುವುದು. ಈ ರಡು ವೃಂದಗಳಿಂದ ಸಿಬ್ಬಂದಿಗಳು ತಮ್ಮ ಕೆಲಸದ ಜೊತೆಗೆ ಕಚೇರಿಯ ಕೆಲಸವನ್ನು ಕೂಡ ನಿರ್ವಹಿಸಲು ಸೂಕ್ತ ವ್ಯವಸ್ಥೆ ಮಾಡಬೇಕು.
3. ಬಾಹ್ಯ ಮೂಲಗಳ ಮುಖಾಂತರ ಪೂರೈಸುವ ಸಲುವಾಗಿ ಸ್ವೀಕರಿಸಲಾಗುವ ಇಲಾಖೆಯ ಪ್ರಸ್ತಾವನೆಗಳಿಗೆ ಆರ್ಥಿಕ ಇಲಾಖೆಯು ಸಂಚಿತ ನಿಧಿ (Contingencies) ಅಡಿ ಸೂಕ್ತ ಆಯವ್ಯಯವನ್ನು ಒದಗಿಸತಕ್ಕದ್ದು.
4. ಮೇಲ್ಕಂಡ ಸೂಚನೆ ಪ್ರಕಾರ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸಲು / ಪುನರ್ ರಚಿಸಲು / ತಿದ್ದುಪಡಿಸಲು ಮುಂದಿನ ಕ್ರಮ ಜರುಗಿಸಬೇಕು.
5. ಅನುಬಂಧ-ಎ ಸಂಬಂಧದಲ್ಲಿ ಮಾತ್ರ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳ ಪೈಕಿ ಮೇಲೆ ಗುರುತಿಸಿರುವ ಖಾಲಿ ಹುದ್ದೆಗಳನ್ನು ರದ್ದುಪಡಿಸಿದ ನಂತರ, ಇನ್ನುಳಿದ ಖಾಲಿ ಹುದ್ದೆಗಳನ್ನು ಇಲಾಖೆಯಲ್ಲಿ ಉಳಿಸಿಕೊಳ್ಳುವ ಸಲುವಾಗಿ ಹಾಗೂ ಆ ಖಾಲಿ ಹುದ್ದೆಗಳನ್ನು ದಿ 1.4.2000ರಂದು ಖಾಲಿ ಇದ್ದ ಹುದ್ದೆಗಳ ಪೈಕಿ ಶೇ.80 ರಷ್ಟು ಖಾಲಿ ಹುದ್ದೆಗಳನ್ನು ರದ್ದುಪಡಿಸುವ ಪ್ರಕ್ರಿಯೆಯಿಂದ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯಕ್ಕೆ ವಿನಾಯಿತಿಯನ್ನು ನೀಡಲು ನಿರ್ಣಯಿಸಿದ.
6. ಪ್ರತಿ ತಾಲ್ಲೂಕಿನಲ್ಲಿ ಯೋಜನಾ ಘಟಕಗಳನ್ನು ಮುಂದಿನ ಆರು ತಿಂಗಳೊಳಗೆ ಸ್ಥಾಪಿಸಲು ಮೇಲೆ ಓದಲಾದ 5ರ ನಡವಳಿಯನ್ವಯ ಕ್ರಮ ಕೈಗೊಳ್ಳುವುದು. ತಾಲ್ಲೂಕು ಯೋಜನಾ ಘಟಕಗಳಿಗಾಗಿ ಉಳಿಸಿಕೊಂಡಿರುವ ಖಾಲಿ ಇರುವ ಹುದ್ದೆಗಳನ್ನು ಇನ್ನಾವುದೇ ಬೇರೆ ವಿಧದಲ್ಲಿ ಭರ್ತಿ ಮಾಡಲು ಇಲಾಖೆಗೆ ಅವಕಾಶವಿರುವುದಿಲ್ಲ.
7. ತಾಲ್ಲೂಕು ಯೋಜನಾ ಘಟಕಗಳನ್ನು ಪ್ರಾರಂಭಿಸದೇ ಇದ್ದಲ್ಲಿ, ಸಹಾಯಕ ಸಾಂಖ್ಯಿಕ ಅಧಿಕಾರಿ ರವರ ವೃಂದದಲ್ಲಿ 43 ಖಾಲಿ ಹುದ್ದೆಗಳು, ಹಾಗೂ ಸಾಂಖ್ಯಿಕ ನಿರೀಕ್ಷಕರು/ಪ್ರಗತಿ ಸಹಾಯಕರು ರವರ ವೃಂದದಲ್ಲಿ 30 ಖಾಲಿ ಹುದ್ದೆಗಳನ್ನು ರದ್ದುಪಡಿಸಲು ಮುಂದಿನ ಕ್ರಮ ಜರುಗಿಸುವಂತೆ ಸೂಚಿಸಿದೆ ಹಾಗೂ ತೆಗೆದುಕೊಂಡ ಕ್ರಮದ ಬಗ್ಗೆ ವರದಿಯನ್ನು ಸಮಿತಿಗೆ 6 (ಆರು) ತಿಂಗಳೊಳಗೆ ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಚಿತವಾದ ಅಧಿಕಾರಯುತ ಸಮಿತಿ ಸಭೆ ನಡವಳಿ ದಿನಾಂಕ 1.3.2005, 16.4.2005 ಮತ್ತು 13.6.2005 ಹಾಗೂ ದಿನಾಂಕ 2.5.2006ರ ಸಭೆ ನಡವಳಿಗಳನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಸುಧಾಬಾಯಿ**

ಪೀಠಾಧಿಕಾರಿ, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ANNEXURE-A

| Sl. No. | Name of the Post | No. of posts sanctioned posts as on 1.4.2000 | Posts filled up as on 1.4.2000 | Posts vacant as on 1.4.2000 | Posts abolished if any from 1.4.2000 & 1.4.2005 | New Posts sanctioned 1.4.2000 & 1.4.2005 | No. of posts sanctioned as on 1.4.2005 | No. of Posts filled up as on 1.4.2005 | No. of posts vacant as on 1.4.2005 | No. of posts proposed for bolition uner 80% cut by the Department |
|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | Director | 01 | 01 | - | - | - | 01 | 01 | - | NIL |

| 1 | 2 | 3 | 4 | 5 | 6 | 7 | 8 | 9 | 10 | 11 |
|---|---|---|---|---|---|---|---|---|---|---|
| 2 | Joint Director | 06 | 06 | - | - | 01 | 06 | 05 | 01 | - |
| 3 | Deputy Director/ District Statistical officer | 33 | 20 | 13 | - | 01 | 33 | 26 | 07 | - |
| 4 | Administrative Officer | 01 | 01 | - | - | - | 01 | 01 | - | - |
| 5 | Assistant Director | 32 | 32 | - | - | - | 32 | 28 | 04 | - |
| 6 | Assistant Statistical Officer | 196 | 137 | 59 | - | 02 | 196 | 153 | 43 | 20 |
| 7 | Statistical Inspector | 279 | 240 | 39 | - | 04 | 279 | 187 | **92 | - |
| 8 | Enumarator | 204 | 160 | 44 | - | - | 204 | 192 | 12 | - |
| 9 | Superintendent | 26 | 19 | 07 | - | - | 26 | 25 | 01 | - |
| 10 | First Div.Assistant | 45 | 29 | 16 | - | - | 45 | 32 | 13 | 04 |
| 11 | Second Div.Assistant | 35 | 34 | 01 | - | - | 35 | 33 | 02 | - |
| 12 | Stenographer | 07 | 07 | - | 01 | *01 | 06 | 06 | - | - |
| 13 | Typists | 67 | 57 | 10 | - | *01 | 67 | 59 | 08 | - |
| 14 | Drivers | 35 | 28 | 07 | - | - | 35 | 26 | 09 | 07 |
| 15 | Group D | 72+9 | 49+9 | 23 | - | - | 72+9 | 71 | 10 | 07 |
| | **Total** | **1048** | **829** | **219** | **01** | ***10** | **1047** | **845** | **202** | **38** |

**Note:-** * 1. This denotes posts sanctioned under 5th Economics census (for 2 years)

** 2. This enotes, that under this category 50 posts have been folled up by promotion from cadre of Enumerators on 30.4.2005.

**P. SUDHA BAI**
Desk Officer,
Planning & Statistics Department.

**ANNEXURE-B**

**Details of cadre wise vacant Posts in the DES as on 1.4.2000 and as on 31.12.2004 is as follows**

| Sl. No. | Cadre | Sanctioned Posts | | | As on 1.4.2000 | | 80% | | As on 31.2.2004 | |
|---|---|---|---|---|---|---|---|---|---|---|
| | | DES | Deptn Res | Total | DES | Deptn Res | DES | Deptn Res | DES | Deptn Res |
| 1 | Deputy Director | 33 | 60 | 93 | 13 | 21 | 10 | 16 | 06 | 15 |
| 2 | Assistant Director | 32 | 105 | 137 | Nil | - | - | - | 04 | 49 |
| 3 | Assistant Statistical Officer | 196 | 361 | 557 | 59 | 56 | 47 | 45 | 43 | |
| 4 | Statistical Inspector | 279 | 336 | 615 | 39 | 164 | 31 | 131 | 92 | 150 |
| 5 | Enyumerator | 204 | - | 204 | 44 | - | 35 | - | 14 | - |
| 6 | Superintendent | 26 | - | 26 | 07 | - | 06 | - | 01 | - |
| 7 | First Div.Assistant | 45 | - | 45 | 16 | - | 13 | - | 13 | - |
| 8 | Second Div. Assistant | 35 | - | 35 | 01 | - | - | - | 03 | - |
| 9 | Typists | 67 | - | 67 | 10 | - | 08 | - | 08 | - |
| 10 | Drivers | 35 | - | 35 | 07 | - | 06 | - | 06 | - |
| 11 | Group D | 72 | - | 72 | 23 | - | 18 | - | 9 | - |
| **12** | **Total** | **1024** | **862** | **1886** | **219** | **241** | **174** | **192** | **201** | **204** |

**P. SUDHA BAI**
P.R. 1077
Desk Officer,
Planning & Statistics Department.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ಆದೇಶ ಸಂಖ್ಯೆ: ಸಂಕಇ 78 ಕಸನಿ 2006, ಬೆಂಗಳೂರು, ದಿನಾಂಕ: 20ನೇ ಜುಲೈ 2006**

**ವಿಷಯ:** ಶ್ರೀ ವಿ. ಶ್ರೀನಿವಾಸ್, ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರನ್ನು ಚೆನ್ನೈಗೆ ನಿಯೋಜಿಸುವ ಬಗ್ಗೆ.

ಶ್ರೀ ವಿ. ಶ್ರೀನಿವಾಸ್, ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರನ್ನು ಅಯನಾವರಂ ಕನ್ನಡ ಸಂಘವು ಚೆನ್ನೈನಲ್ಲಿ ದಿನಾಂಕ: 23.7.2006 ರಂದು ಏರ್ಪಡಿಸಿರುವ ಸಂಘದ ಸುವಣ ಮಹೋತ್ಸವ ಸಮಾರೋಪ ಸಮಾರಂಭದಲ್ಲಿ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಅವರ ಪರವಾಗಿ ಕರ್ನಾಟಕ ರಾಜ್ಯದ ಪ್ರತಿನಿಧಿಯಾಗಿ ಭಾಗವಹಿಸಲು ಈ ಮೂಲಕ ನಿಯೋಜಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಪಿ.ಆರ್. 1086
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ, (ಆಡಳಿತ ಕನ್ನಡ).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಸುತ್ತೋಲೆ: ಸಂಖ್ಯೆ: ಸಿಆಸುಇ 1 ಎಸ್‌ಸಿಸಿ 2006, ಬೆಂಗಳೂರು, ದಿನಾಂಕ: 11ನೇ ಜುಲೈ 2006**

**ವಿಷಯ:** ಸರ್ಕಾರಿ ನೌಕರರ ಮುಂಬಡ್ತಿ ಮತ್ತು ಶಿಸ್ತು ಪ್ರಕರಣಗಳಲ್ಲಿ ಸರ್ಕಾರ ಹೊರಡಿಸುವ ಅಂತಿಮ ಆದೇಶದ ಪ್ರತಿಗಳನ್ನು ಕರ್ನಾಟಕ ಲೋಕ ಸೇವಾ ಆಯೋಗಕ್ಕೆ ಒದಗಿಸುವ ಬಗ್ಗೆ.

**ಉಲ್ಲೇಖ:** ಕರ್ನಾಟಕ ಲೋಕ ಸೇವಾ ಆಯೋಗದ ಅಧ್ಯಕ್ಷರ ದಿನಾಂಕ 8.5.2006ರ ಪತ್ರ ಸಂಖ್ಯೆ: ಪಿಎಸ್‌ಸಿ 7 ಸಿಎನ್‌ಎಸ್ 2006.

ಕರ್ನಾಟಕ ಲೋಕ ಸೇವಾ ಆಯೋಗ (ಸಮಾಲೋಚನೆ) ವಿನಿಮಯಗಳು, 2000ದ ವಿನಿಮಯ 3 ಮತ್ತು 5ರ ಅನ್ವಯ ಸರ್ಕಾರಿ ನೌಕರರಿಗೆ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಮುಂಬಡ್ತಿ ನೀಡುವ ಪ್ರಕರಣಗಳಲ್ಲಿ ಮತ್ತು ಸರ್ಕಾರಿ ನೌಕರರ ವಿರುದ್ಧ ಶಿಸ್ತು ಪ್ರಕರಣ ನಡೆಸಿ ಸರ್ಕಾರವು ಕಠಿಣ ದಂಡನೆಯನ್ನು ವಿಧಿಸಿ ಆದೇಶವನ್ನು ಹೊರಡಿಸುವ ಸಂದರ್ಭದಲ್ಲಿ ಅಥವಾ ಶಿಸ್ತು ಪ್ರಕರಣಕ್ಕೆ ಸಂಬಂಧಿಸಿದಂತೆ ಸರ್ಕಾರವು ಮೇಲ್ಮನವಿಯಲ್ಲಿ ಆದೇಶ ಹೊರಡಿಸುವ ಸಂದರ್ಭದಲ್ಲಿ ಕರ್ನಾಟಕ ಲೋಕ ಸೇವಾ ಆಯೋಗದೊಡನೆ ಸಮಾಲೋಚನೆ ನಡೆಸುವುದು ಅವಶ್ಯಕವಾಗಿರುತ್ತದೆ. ಕರ್ನಾಟಕ ಲೋಕ ಸೇವಾ ಆಯೋಗದ ಸಮಾಲೋಚನೆ ಪಡೆದು ಸರ್ಕಾರದ ಆಡಳಿತ ಇಲಾಖೆಗಳು ಅಂತಿಮ ಆದೇಶಗಳನ್ನು ಹೊರಡಿಸಿದ ನಂತರ ಆದೇಶದ ಪ್ರತಿಗಳನ್ನು ಆಯೋಗದ ಮಾಹಿತಿಗೆ ಕಳುಹಿಸದೆ ಇರುವುದನ್ನು ಮತ್ತು ಇಂತಹ ಪ್ರಕರಣಗಳನ್ನು ಆಯೋಗದ ವಾರ್ಷಿಕ ವರದಿಯಲ್ಲಿ ನಮೂದಿಸಿದರೂ ಸಂಬಂಧಪಟ್ಟ ಆದೇಶದ ಪ್ರತಿಗಳನ್ನು ಆಯೋಗಕ್ಕೆ ಒದಗಿಸಿಲ್ಲವೆಂದು ಉಲ್ಲೇಖದ ಪತ್ರದಲ್ಲಿ ಆಯೋಗದ ಅಧ್ಯಕ್ಷರು ಸರ್ಕಾರದ ಗಮನಕ್ಕೆ ತಂದಿರುತ್ತಾರೆ.

ಆದುದರಿಂದ ಸರ್ಕಾರದ ಎಲ್ಲಾ ಆಡಳಿತ ಇಲಾಖೆಗಳು ಸರ್ಕಾರಿ ನೌಕರರ ಮುಂಬಡ್ತಿ ಮತ್ತು ಶಿಸ್ತು ಪ್ರಕರಣಗಳಲ್ಲಿ ಕರ್ನಾಟಕ ಲೋಕಸೇವಾ ಆಯೋಗ (ಸಮಾಲೋಚನೆ) ವಿನಿಯಮಗಳು, 2000ದ ವಿನಿಮಯ 3 ಮತ್ತು 5 ರನ್ವಯ ಆಯೋಗದೊಡನೆ ಸಮಾಲೋಚನೆ ನಡೆಸಿ, ಅಂತಿಮ ಆದೇಶಗಳನ್ನು ಹೊರಡಿಸಿದ ನಂತರ ಅವುಗಳ ಪ್ರತಿಗಳನ್ನು ಕರ್ನಾಟಕ ಲೋಕ ಸೇವಾ ಆಯೋಗಕ್ಕೆ ತಪ್ಪದೇ ಒದಗಿಸಲು ಕ್ರಮ ತೆಗೆದುಕೊಳ್ಳುವಂತೆ ಈ ಮೂಲಕ ಸೂಚಿಸಲಾಗಿದೆ.

**ದೇವರಾಜು**

ಪಿ.ಆರ್. 1090 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು-1)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ವಿವಿಧ ಇಲಾಖೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಗ್ರೂಪ್ 'ಎ' ವೃಂದದ ಅಧಿಕಾರಿಗಳಿಗೆ ವಿಧಾನ ಮಂಡಲ ಅಧಿವೇಶನ ಸಮಯದಲ್ಲಿ ಕಾರ್ಯ ನಿರ್ವಹಿಸುವುದಕ್ಕಾಗಿ ಗೌರವ ಧನವನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ: ಎಫ್‌ಡಿ 1406 ಸೇವೆಗಳು-2/2006 ದಿನಾಂಕ: 20.6.2006.

**ಪ್ರಸ್ತಾವನೆ:**

ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸೇವೆಗಳು-2) ಇವರು ಮೇಲೆ ಓದಲಾದ ದಿನಾಂಕ: 20.6.2006 ಅನಧಿಕೃತ ಟಿಪ್ಪಣಿಯಲ್ಲಿ ವಿಧಾನ ಮಂಡಲ ಅಧಿವೇಶನ ನಡೆಯುವ ಸಮಯಲ್ಲಿ ಕಾರ್ಯ ನಿರ್ವಹಿಸುವ ಸಚಿವಾಲಯದ ಗ್ರೂಪ್ 'ಎ' ವೃಂದದ ಅಧಿಕಾರಿಗಳಿಗೆ ಗೌರವ ಧನವನ್ನು ಮಂಜೂರು ಮಾಡುವ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಯು ಪುನರ್ ಪರಿಶೀಲಿಸಿದ್ದು, ಅದರಂತೆ ಸಚಿವಾಲಯದ ಈ ಕೆಳಕಂಡ ಇಲಾಖೆಗಳ ಗ್ರೂಪ್ 'ಎ' ವೃಂದದ ಅಧಿಕಾರಿಗಳಿಗೆ (ಐ.ಎ.ಎಸ್. ವೃಂದದ ಅಧಿಕಾರಿಗಳನ್ನು ಹೊರತುಪಡಿಸಿ) ದಿನ ಒಂದಕ್ಕೆ ರೂ. 125.00 (ರೂ. ಒಂದು ನೂರಾ ಇಪ್ಪತ್ತೈದು) ರಂತೆ ಗೌರವ ಧನವನ್ನು ಪ್ರಸ್ತುತ ವಿಧಾನ ಮಂಡಲ ಅಧಿವೇಶನ ಪ್ರಾರಂಭಗೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಒಪ್ಪಿರುತ್ತದೆ ಎಂದು ತಿಳಿಸಿರುತ್ತಾರೆ:-

1. ಮುಖ್ಯ ಮಂತ್ರಿಯವರ ಸಚಿವಾಲಯ
2. ಉಪ ಮುಖ್ಯ ಮಂತ್ರಿಯವರ ಸಚಿವಾಲಯ
3. ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆ
4. ಸಂ.ವ್ಯ.ಶಾ.ರ.ಇಲಾಖೆಯ 'ಪ್ರಾರೂಪಣಾ ವಿಭಾಗ'

ಆದುದರಿಂದ, ಮೇಲ್ಕಂಡ ಇಲಾಖೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಗ್ರೂಪ್ 'ಎ' ವೃಂದದ ಅಧಿಕಾರಿಗಳಿಗೆ ಗೌರವಧನವನ್ನು ಮಂಜೂರು ಮಾಡುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 317 ಸಆಸೇ 2006, ಬೆಂಗಳೂರು, ದಿನಾಂಕ: 17ನೇ ಜುಲೈ 2006**

ಕರ್ನಾಟಕ ಸರ್ಕಾರದ ಸಚಿವಾಲಯದ ಈ ಕೆಳಕಂಡ ಇಲಾಖೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಗ್ರೂಪ್ 'ಎ' ವೃಂದದ ಅಧಿಕಾರಿಗಳಿಗೆ (ಐ.ಎ.ಎಸ್. ವೃಂದದ ಅಧಿಕಾರಿಗಳನ್ನು ಹೊರತುಪಡಿಸಿ) ವಿಧಾನ ಮಂಡಲ ಅಧಿವೇಶನ ಅವಧಿಯಲ್ಲಿ ಕಾರ್ಯನಿರ್ವಹಿಸುವುದಕ್ಕಾಗಿ ದಿನ ಒಂದಕ್ಕೆ ರೂ. 125.00 (ರೂ. ಒಂದು ನೂರಾ ಇಪ್ಪತ್ತೈದು) ರಂತೆ ಗೌರವ ಧನವನ್ನು ಪ್ರಸ್ತುತ ವಿಧಾನ ಮಂಡಲ ಅಧಿವೇಶನ ಪ್ರಾರಂಭಗೊಂಡ ದಿನಾಂಕ: 19.6.2006 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲಾಗಿರುತ್ತದೆ.

1. ಮುಖ್ಯ ಮಂತ್ರಿಯವರ ಸಚಿವಾಲಯ
2. ಉಪ ಮುಖ್ಯ ಮಂತ್ರಿಯವರ ಸಚಿವಾಲಯ
3. ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆ
4. ಸಂ.ವ್ಯ.ಶಾ.ರ.ಇಲಾಖೆಯ 'ಪ್ರಾರೂಪಣಾ ವಿಭಾಗ'

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 1406 ಸೇವೆಗಳು (2)/2006, ದಿನಾಂಕ: 20.6.2006ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1091 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಶ್ರೀ ಟಿ.ಎನ್. ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 18 ಎಸ್ಇಎನ್ 2005 ದಿನಾಂಕ: 3.11.05 ಮತ್ತು 14.3.06.
2. ಶ್ರೀ ಟಿ.ಎನ್. ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವರದಿ ದಿ:2.2.06 ಮತ್ತು 22.6.06.

**ಪ್ರಸ್ತಾವನೆ:**

ಶ್ರೀ ಎಫ್.ಆರ್, ಸಂಬರಗಿ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯದ ಶಿಕ್ಷಣ ಇಲಾಖೆಯ ಸೇವೆಗಳು ಶಾಖೆಗಳ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಸೇವೆಗಳು-1 ಶಾಖೆಯಲ್ಲಿ ಹಿರಿಯ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಬಿ.ಎನ್. ಶಿವಶಂಕರ್ ಅವರೊಂದಿಗೆ ಷಾಮೀಲಾಗಿ ಮೇಲಾಧಿಕಾರಿಗಳ ಯಾವುದೇ ಆದೇಶವಿಲ್ಲದೆ ಶ್ರೀ ಜೆ.ರಾಜು, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢ ಶಾಲೆ, ಕೆ. ಬೆಳತ್ತೂರು, ಹೆಗ್ಗಡದೇವನಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ ಅವರನ್ನು ಖೊಟ್ಟಿ/ಬೋಗಸ್ ವರ್ಗಾವಣೆ ಆದೇಶ/ಅಧಿಸೂಚನೆಯನ್ನು ಸೃಷ್ಟಿಸಿ ಅದರ ಮೂಲಕ ಮೈಸೂರಿನ ಪ್ರ-ಶಿಕ್ಷಣ ಸಂಸ್ಥೆ (ಟಿಟಿಐ)ಯಲ್ಲಿನ ಅಧೀಕ್ಷಕರ ಹುದ್ದೆಗೆ ವರ್ಗಾಯಿಸಲು ಪ್ರಯತ್ನಿಸಿದ ಆರೋಪಗಳಿಗೆ ಸಂಬಂಧಿಸಿದಂತೆ ಶ್ರೀ ಎಫ್.ರ್. ಸಂಬರಗಿ, ಅಧೀನ ಕಾರ್ಯದರ್ಶಿ ಹಾಗೂ ಶ್ರೀ ಬಿ.ಎನ್. ಶಿವಶಂಕರ್, ಹಿರಿಯ ಸಹಾಯಕ ಅವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 18 ಎಸ್ಇಎನ್ 05 (ಭಾ), ಬೆಂಗಳೂರು, ದಿನಾಂಕ: 14ನೇ ಜುಲೈ 2006**

ಸರ್ಕಾರವು ಶ್ರೀ ಟಿ.ಎನ್. ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರು ಮೇಲೆ ಪ್ರಸ್ತಾವನೆಯಲ್ಲಿ ತಿಳಿಸಿರುವ ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 16 ಸೇಇವಿ 05 ದಿನಾಂಕ:23.8.2005 ರನ್ವಯ ರೂ.6,000/- (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001, ದಿನಾಂಕ:4.3.2002 ರನ್ವಯ ರೂ.1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಇವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052 ಸಚಿವಾಲಯ ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸಕಾರದ ಸಚಿವಾಲಯ-051 ಸಾಮಾನ್ಯ ವೆಚ್ಚಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1092

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ಕಂದಾಯ ಸಚಿವಾಲಯ

**ವಿಷಯ:** ಇಲಾಖೆಯ ಬರ ಉಸ್ತುವಾರಿ ಕೋಶವನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 382 ಟಿಎನ್ಆರ್ 2002, ದಿನಾಂಕ: 3.1.2003.
2. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 369 ಟಿಎನ್ಆರ್ 2003, ದಿನಾಂಕ: 24.6.2003.
3. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 369 ಟಿಎನ್ಆರ್ 2003, ದಿನಾಂಕ: 10.11.2003.
4. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 369 ಟಿಎನ್ಆರ್ 2003, ದಿನಾಂಕ: 17.7.2004.
5. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 608 ಟಿಎನ್ಆರ್ 2004, ದಿನಾಂಕ: 22.12.2004.
6. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 608 ಟಿಎನ್ಆರ್ 2004, ದಿನಾಂಕ: 28.12.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ನೇತೃತ್ವದಲ್ಲಿ ಪ್ರತಿಯೊಂದು ಕಂದಾಯ ವಿಭಾಗದಲ್ಲಿನ ಬರ ಪರಿಸ್ಥಿತಿಯನ್ನು ಅವಲೋಕಿಸಲು ಬರ ಉಸ್ತುವಾರಿ ಕೋಶವನ್ನು ದಿನಾಂಕ 1.12.2002 ರಿಂದ 30.6.2003 ರವರೆಗೆ ಸೃಜಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ 24.6.2003ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಮಾತ್ರ ಪೂರಕ ಸಿಬ್ಬಂದಿ ಸಹಿತ ದಿನಾಂಕ 1.7.2003 ರಿಂದ 31.12.2003ರವರೆಗೆ ಮುಂದುವರಿಸಲು ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ 10.11.2003ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಮಾತ್ರ ಪೂರಕ ಸಿಬ್ಬಂದಿ ಸಹಿತ ದಿನಾಂಕ 1.1.2004 ರಿಂದ 30.6.2004ರವರೆಗೆ ಮುಂದುವರಿಸಲು ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ (4)ರಲ್ಲಿ ಓದಲಾದ ದಿನಾಂಕ 17.7.2004ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಗಳ ಪೈಕಿ ಒಂದು ಹುದ್ದೆನ್ನು ಮಾತ್ರ ಪೂರಕ ಸಿಬ್ಬಂದಿ ಸಹಿತ ದಿನಾಂಕ 1.7.2004 ರಿಂದ 31.12.2004ರವರೆಗೆ ಮುಂದುವರಿಸಲು ಮಂಜೂರಾತಿಯನ್ನು ನೀಡಲಾಗಿತ್ತು.

ಉಲ್ಲೇಖ (5)ರಲ್ಲಿ ಓದಲಾದ ದಿನಾಂಕ 22.12.2004ರ ಸರ್ಕಾರದ ಆದೇಶದಲ್ಲಿ ಸದರಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಮಾತ್ರ ಪೂರಕ ಸಿಬ್ಬಂದಿಯೊಂದಿಗೆ ದಿನಾಂಕ 1.1.2005 ರಿಂದ 30.6.2005ರವರೆಗೆ ಮುಂದುವರಿಸಲು ಮಂಜೂರಾತಿ ನೀಡಲಾಗಿತ್ತು.

ಉಲ್ಲೇಖ (6)ರಲ್ಲಿ ಓದಲಾದ ದಿನಾಂಕ: 28.12.2005ರ ಆದೇಶದಲ್ಲಿ ಸದರಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಮಾತ್ರ ಪೂರಕ ಸಿಬ್ಬಂದಿಯೊಂದಿಗೆ ದಿನಾಂಕ 1.7.2005 ರಿಂದ 30.6.2006ರವರೆಗೆ ಮುಂದುವರಿಸಲಾಗಿತ್ತು.

ರಾಜ್ಯದಲ್ಲಿ ಪ್ರಸ್ತುತ ಇರುವ ಪ್ರವಾಹ ಪರಿಸ್ಥಿತಿಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರವು ಈಗಾಗಲೇ ಬಿಡುಗಡೆ ಮಾಡಿರುವ ಆಹಾರಧಾನ್ಯಗಳ ಬಳಕೆ ಹಾಗೂ ಪರಿಹಾರಕ್ಕೆ ಸಂಬಂಧಿಸಿದಂತೆ ಇನ್ನಿತರೆ ಕೆಲಸ ಕಾರ್ಯದರ್ಶಿಗಳನ್ನು ನಿರ್ವಹಿಸುವ ಸಲುವಾಗಿ ಈ ಬರ ಉಸ್ತುವಾರಿ ಕೋಶಕ್ಕೆ

ವಿಶೇಷಾಧಿಕಾರಿ ಹುದ್ದೆಯನ್ನು ಮುಂದುವರಿಸುವ ಬಗ್ಗೆ ಪರಿಶೀಲಿಸಿದೆ. ಹಿಂದಿನ ಪೂರಕ ಸಿಬ್ಬಂದಿ ಪ್ರಾದೇಶಿಕ ಆಯುಕ್ತರ ಕಛೇರಿಗೆ ಮರು ನಿಯುಕ್ತಿಗೊಂಡಿರುವುದರಿಂದ ಹೊಸದಾಗಿ ಮಂಜೂರಾತಿ ಪಡೆಯಲು ಪ್ರತ್ಯೇಕ ಕ್ರಮ ಕೈಗೊಳ್ಳಲಾಗುವುದು.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 286 ಟಿಎನ್‌ಆರ್ 2006, ಬೆಂಗಳೂರು, ದಿನಾಂಕ: 13ನೇ ಜುಲೈ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕಂದಾಯ ಇಲಾಖೆಯ ಕಾರ್ಯದರ್ಶಿಯವರ ನೇರ ನೇತೃತ್ವದಲ್ಲಿರುವ ಬರ ಉಸ್ತುವಾರಿ ಕೋಶಕ್ಕೆ ಮಂಜೂರಾಗಿರುವ 4 ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಮಾತ್ರ ವಿಶೇಷಾಧಿಕಾರಿ: ಉಪ ಕಾರ್ಯಶಿ (ಬರ ಉಸ್ತುವಾರಿ ಕೋಶ) ಹುದ್ದೆಯನ್ನು ದಿ:1.7.2006 ರಿಂದ 30.6.2007ರವರೆಗೆ ಅಥವಾ ಮುಂದಿನ ಆದೇಶದವರೆಗೆ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲಾಗಿದೆ.

2. ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.96ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು-2)

ಪಿ.ಆರ್. 1093

**ವಿಷಯ:** ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ) ರಾಜಾಜಿನಗರ, ಬೆಂಗಳೂರು, ಈ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿಗಳ ಬದಲಾವಣೆ ಹಾಗೂ ಆಡಳಿತಾಧಿಕಾರಿಗಳ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಂಇ 41 ಮುನೊಸೊ 2004, ದಿನಾಂಕ: 26.8.2005.
2. ಜಿಲ್ಲಾ ನೋಂದಣಾಧಿಕಾರಿಗಳ ಪತ್ರ ಸಂಖ್ಯೆ: 937/1993-94 ದಿನಾಂಕ: 27.2.2006.
3. ಆಡಳಿತಾಧಿಕಾರಿಗಳು, ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ) ರಾಜಾಜಿನಗರ, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬ್ಬಂದಿ(1) ಸಿಆರ್ 11-2006-07 ದಿನಾಂಕ: 9.5.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ), ರಾಜಾಜಿನಗರ, ಬೆಂಗಳೂರು ಈ ಸಂಸ್ಥೆಯ ಹಿತದೃಷ್ಟಿಯಿಂದ ಆಡಳಿತಾಧಿಕಾರಿ ನೇಮಕ ಮಾಡಲಾಗಿತ್ತು. ಓದಲಾದ (2)ರ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ರವರು ಪ್ರಸ್ತಾವನೆಯನ್ನು ಸಲ್ಲಿಸಿ ಸಂಸ್ಥೆಗೆ ಚುನಾವಣೆ ನಡೆಸುವ ಉದ್ದೇಶ ಪೂರ್ಣವಾಗಿರುವುದಿಲ್ಲವಾದ್ದರಿಂದ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಲು ಕೋರಿದ್ದಾರೆ ಹಾಗೂ ಓದಲಾದ (3) ರಲ್ಲಿ ಆಳಿತಾಧಿಕಾರಿಯವರು ಸಲ್ಲಿಸಿರುವ ವರದಿಯಲ್ಲಿ ಸಂಸ್ಥೆಗೆ ಚುನಾವಣೆ ನಡೆಸಿ ಅಧಿಕಾರವನ್ನು ಹಸ್ತಾಂತರಿಸಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ ಆಡಳಿತಾಧಿಕಾರಿ ಅವಧಿಯನ್ನು ಇನ್ನು 6 ತಿಂಗಳ ಅವಧಿಗೆ ವಿಸ್ತರಿಸಲು ಕೋರಿದ್ದಾರೆ. ಓದಲಾದ (2) ಮತ್ತು (3)ರ ಪ್ರಸ್ತಾವನೆಗಳನ್ನು ಸರ್ಕಾರವು ಪರಿಶೀಲಿಸಿ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಲು ಹಾಗೂ ಸದರಿ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿಯನ್ನು ಬದಲಾಯಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 41 ಮುನೊಸೋ 2004, ಬೆಂಗಳೂರು, ದಿನಾಂಕ: 28ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಕಂಇ 41 ಮುನೊಸೊ 2004, ದಿನಾಂಕ: 26.8.2005 ರಲ್ಲಿ ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ), ರಾಜಾಜಿನಗರ, ಬೆಂಗಳೂರು, ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಆಡಳಿತಾಧಿಕಾರಿಯಾಗಿ ನೇಮಕ ಮಾಡಲಾಗಿದ್ದ ಬೆಂಗಳೂರು ಉತ್ತರ ತಾಲ್ಲೂಕು, ತಹಶೀಲ್ದಾರ್ ಇವರನ್ನು ಬದಲಾಯಿಸಿ ಆಡಳಿತಾಧಿಕಾರಿಯನ್ನಾಗಿ ಬೆಂಗಳೂರು (ಉತ್ತರ) ವ್ಯಾಪ್ತಿಗೆ ಬರುವ ಮನೆ ಬಾಡಿಗೆ ಮತ್ತು ವಸತಿ ನಿಯಂತ್ರಣಾಧಿಕಾರಿ ಇವರನ್ನು ಆಡಳಿತಾಧಿಕಾರಿಯಾಗಿ ನೇಮಿಸಿದೆ. ಹಾಗೂ ಆಡಳಿತಾಧಿಕಾರಿಯ ಅವಧಿಯನ್ನು ದಿನಾಂಕ:26.2.2006 ರಿಂದ 25.8.2006 ರವರೆಗೆ ವಿಸ್ತರಿಸಿದೆ. ಈ ಅವಧಿಯೊಳಗೆ ಆಡಳಿತಾಧಿಕಾರಿಗಳು ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪೀಠಾಧಿಕಾರಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್. 1094

**ವಿಷಯ:** ಶ್ರೀ ಎ.ವಿ. ನಾಡಗೌಡ, ಹಿಂದಿನ ತಹಶೀಲ್ದಾರ್, ವಿರಾಜಪೇಟೆ ತಾಲ್ಲೂಕು ಮತ್ತಿತರರ ವಿರುದ್ಧದ ಜಂಟಿ ಇಲಾಖಾ ವಿಚಾರಣೆ ಬಗ್ಗೆ-ದೋಷ ಮುಕ್ತರನ್ನಾಗಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಆರ್.ಡಿ. 38.ಎಡಿಇ:2001, ದಿ:29.5.2004.
2. ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರ ದಿ:18.5.2005ರ ಪತ್ರದೊಂದಿಗೆ ಸಲ್ಲಿಸಿದ ವಿಚಾರಣಾ ವರದಿ ದಿ:18.5.2005.

**ಪ್ರಸ್ತಾವನೆ:**

ಕೊಡಗು ಜಿಲ್ಲೆ ವಿರಾಜಪೇಟೆ ತಾಲ್ಲೂಕಿನಲ್ಲಿ ಮತದಾರರ ಗುರುತಿನ ಚೀಟಿಗಳ ನಿರ್ವಹಣೆಯಲ್ಲಿ ಕರ್ತವ್ಯ ಲೋಪ ಎಸಗಿರುವ ಈ ಕೆಳಕಂಡ ಅಧಿಕಾರಿ/ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರ.ಸಂ. 1ರಲ್ಲಿ ಓದಲಾದ ದಿನಾಂಕ: 29.5.2004ರ ಸರ್ಕಾರಿ ಆದೇಶದಲ್ಲಿ ಸರ್ಕಾರವು ಆದೇಶಿಸಿ ಶ್ರೀ ಎನ್.ಎಸ್. ಸಂಗೊಳ್ಳಿ ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಹಾಗೂ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿ ಮುಂದೆ ಮಂಡಿಸಲು ಮಡಿಕೇರಿ ಉಪ ವಿಭಾಗಾಧಿಕಾರಿಯವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

1. ಶ್ರೀ ಎ.ವಿ. ನಾಡಗೌಡ, ತಹಶೀಲ್ದಾರ್
2. ಶ್ರೀ ಬಿ.ಜಿ. ವಿಷ್ಣುರಾವ್, ತಹಶೀಲ್ದಾರ್ (ಈಗ ನಿವೃತ್ತರು)
3. ಶ್ರೀ ಎಂ.ಎಸ್. ಚಿಕ್ಕ ಹೊನ್ನಪ್ಪ, ತಹಶೀಲ್ದಾರ್
4. ಶ್ರೀ ಎನ್. ಸುಬ್ಬಣ್ಣ, ತಹಶೀಲ್ದಾರ್ (ಈಗ ನಿವೃತ್ತರು)

5. ಶ್ರೀ ಲಾಲಂಕಿ ರವಿ, ಶಿರಸ್ತೇದಾರ್ 6. ಶ್ರೀ ಟಿ.ಎನ್. ಲಕ್ಷ್ಮಣ, ರಾಜಸ್ವ ನಿರೀಕ್ಷಕರು (ಈಗ ನಿವೃತ್ತರು)
7. ಶ್ರೀ ವಿ.ಜಿ. ಗೋಪಾಲಕೃಷ್ಣ, ಗ್ರಾಮಲೆಕ್ಕಿಗ 8. ಶ್ರೀ ಎಂ.ಡಿ. ನಾಗರಾಜು, ರಾಜಸ್ವ ನಿರೀಕ್ಷಕರು

ವಿಚಾರಣಾಧಿಕಾರಿಯವರು ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆ ಜರುಗಿಸಿ, ಮೇಲೆ ಕ್ರ.ಸಂ.2ರಲ್ಲಿ ಓಲಾದ ದಿ:18.5.2005ರ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು ಅದರಲ್ಲಿ ಶ್ರೀ ವಿ.ಜಿ. ಗೋಪಾಲಕೃಷ್ಣ, ಗ್ರಾಮ ಲೆಕ್ಕಿಗ, ಇವರ ವಿರುದ್ಧ ಹೊರಿಸಲಾದ ಆರೋಪ ಸಾಬೀತಾಗಿದೆಯೆಂದು ಹಾಗೂ ಉಳಿದವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿಲ್ಲವೆಂದು ವರದಿ ಮಾಡಿದ್ದಾರೆ. ಶ್ರೀ ವಿ.ಜಿ. ಗೋಪಾಲಕೃಷ್ಣ ಗ್ರಾಮ ಲೆಕ್ಕಿಗ ಇವರಿಗೆ ದಂಡನೆ ವಿಧಿಸುವ ಬಗ್ಗೆ ಪ್ರತ್ಯೇಕ ಕ್ರಮ ಜರುಗಿಸಲಾಗುವುದು.

ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿದ ವಿಚಾರಣಾ ವರದಿ ಹಾಗೂ ಅದಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಮರು ಪರಿಶೀಲಿಸಿ ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಈ ಕೆಳಕಂಡ ಅಧಿಕಾರಿ/ನೌಕರರುಗಳ ವಿರುದ್ಧದ ಆರೋಪಗಳು ಸಾಬೀತಾಗದಿರುವುದು ಸ್ಪಷ್ಟವಾಗಿರುವುದು ಇವರುಗಳನ್ನು ಆರೋಪ ಮುಕ್ತರನ್ನಾಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

1. ಶ್ರೀ ಎ.ವಿ. ನಾಡಗೌಡ, ತಹಶೀಲ್ದಾರ್ 2. ಶ್ರೀ ಬಿ.ಜಿ. ವಿಷ್ಣುರಾವ್, ತಹಶೀಲ್ದಾರ್ (ಈಗ ನಿವೃತ್ತರು)
3. ಶ್ರೀ ಎಂ.ಎಸ್. ಚಿಕ್ಕ ಹೊನ್ನಪ್ಪ, ತಹಶೀಲ್ದಾರ್ 4. ಶ್ರೀ ಎನ್. ಸುಬ್ಬಣ್ಣ, ತಹಶೀಲ್ದಾರ್ (ಈಗ ನಿವೃತ್ತರು)
5. ಶ್ರೀ ಲಾಲಂಕಿ ರವಿ, ಶಿರಸ್ತೇದಾರ್ 6. ಶ್ರೀ ಟಿ.ಎನ್. ಲಕ್ಷ್ಮಣ, ರಾಜಸ್ವ ನಿರೀಕ್ಷಕರು(ಈಗ ನಿವೃತ್ತರು)
7. ಶ್ರೀ ಎಂ.ಡಿ. ನಾಗರಾಜು, ರಾಜಸ್ವ ನಿರೀಕ್ಷಕರು

**ಸರ್ಕಾರಿ ಆದೇಶ ಸಂಖ್ಯೆ: ಕಂಇ:38:ಎಡಿಇ:2001, ಬೆಂಗಳೂರು, ದಿನಾಂಕ: 27ನೇ ಜೂನ್ 2006**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡ ಅಧಿಕಾರ/ನೌಕರರುಗಳ ವಿರುದ್ಧ ದಿ:29.5.2004ರ ಆದೇಶದಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಲಾಗಿದೆ.

1. ಶ್ರೀ ಎ.ವಿ. ನಾಡಗೌಡ, ತಹಶೀಲ್ದಾರ್ 2. ಶ್ರೀ ಬಿ.ಜಿ. ವಿಷ್ಣುರಾವ್, ತಹಶೀಲ್ದಾರ್ (ಈಗ ನಿವೃತ್ತರು)
3. ಶ್ರೀ ಎಂ.ಎಸ್. ಚಿಕ್ಕ ಹೊನ್ನಪ್ಪ, ತಹಶೀಲ್ದಾರ್ 4. ಶ್ರೀ ಎನ್. ಸುಬ್ಬಣ್ಣ, ತಹಶೀಲ್ದಾರ್ (ಈಗ ನಿವೃತ್ತರು)
5. ಶ್ರೀ ಲಾಲಂಕಿ ರವಿ, ಶಿರಸ್ತೇದಾರ್ 6. ಶ್ರೀ ಟಿ.ಎನ್. ಲಕ್ಷ್ಮಣ, ರಾಜಸ್ವ ನಿರೀಕ್ಷಕರು(ಈಗ ನಿವೃತ್ತರು)
7. ಶ್ರೀ ಎಂ.ಡಿ. ನಾಗರಾಜು, ರಾಜಸ್ವ ನಿರೀಕ್ಷಕರು

ಈ ಪ್ರಕರಣದ ಮಟ್ಟಿಗೆ ಸಂಬಂಧಿಸಿದಂತೆ ಮೇಲ್ಕಂಡ ಅಧಿಕಾರಿ/ನೌಕರರುಗಳ ವಿರುದ್ಧ ಈ ಜಂಟಿ ಇಲಾಖಾ ವಿಚಾರಣೆಯು ನಡೆಯದಿದ್ದಲ್ಲಿ ಅವರುಗಳು ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 1095

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ಎ.ವಿ. ನಾಡಗೌಡ, ಹಿಂದಿನ ತಹಶೀಲ್ದಾರ್, ವಿರಾಜಪೇಟೆ ಮತ್ತಿತರರ ವಿರುದ್ಧದ ಜಂಟಿ ಇಲಾಖಾ ವಿಚಾರಣೆ ಬಗ್ಗೆ-ದೋಷ ಮುಕ್ತರನ್ನಾಗಿಸುವ ಬಗ್ಗೆ.
ಶ್ರೀ ವಿ.ಜಿ. ಗೋಪಾಲಕೃಷ್ಣ, ಗ್ರಾಮ ಲೆಕ್ಕಿಗ ಇವರಿಗೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಆರ್.ಡಿ. 38.ಎಡಿಇ:2001, ದಿ:29.5.2004.
2. ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರ ದಿ:18.5.2005ರ ಪತ್ರದೊಂದಿಗೆ ಸಲ್ಲಿಸಿದ ವಿಚಾರಣಾ ವರದಿ ದಿ:18.5.2005.
3. ಎರಡನೇ ಕಾರಣ ಕೇಳುವ ನೋಟೀಸು ಸಂ.ಆರ್.ಡಿ.38.ಎಡಿಇ:2001 ದಿ:1.12.2005
4. ಶ್ರೀ ವಿ.ಜಿ. ಗೋಪಾಲಕೃಷ್ಣ, ಗ್ರಾಮಲೆಕ್ಕಿಗ, ಇವರ ಲಿಖಿತ ಸಮಜಾಯಿಷಿ ದಿ:23.12.2005.

**ಪ್ರಸ್ತಾವನೆ:**

ಕೊಡಗು ಜಿಲ್ಲೆ ವಿರಾಜಪೇಟೆ ತಾಲ್ಲೂಕಿನಲ್ಲಿ ಮತದಾರರ ಗುರುತಿನ ಚೀಟಿಗಳ ನಿರ್ವಹಣೆಯಲ್ಲಿ ಕರ್ತವ್ಯ ಲೋಪ ಎಸಗಿರುವ ಈ ಕೆಳಕಂಡ ಅಧಿಕಾರಿ/ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರ.ಸಂ. 1ರಲ್ಲಿ ಓದಲಾದ ದಿನಾಂಕ: 29.5.2004ರ ಸರ್ಕಾರಿ ಆದೇಶದಲ್ಲಿ ಸರ್ಕಾರವು ಶ್ರೀ ಎನ್.ಎಸ್. ಸಂಗೊಳ್ಳಿ ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಹಾಗೂ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿ ಮುಂದೆ ಮಂಡಿಸಲು ಮಡಿಕೇರಿ ಉಪ ವಿಭಾಗಾಧಿಕಾರಿಯವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

1. ಶ್ರೀ ಎ.ವಿ. ನಾಡಗೌಡ, ತಹಶೀಲ್ದಾರ್ 2. ಶ್ರೀ ಬಿ.ಜಿ. ವಿಷ್ಣುರಾವ್, ತಹಶೀಲ್ದಾರ್ (ಈಗ ನಿವೃತ್ತರು)
3. ಶ್ರೀ ಎಂ.ಎಸ್. ಚಿಕ್ಕ ಹೊನ್ನಪ್ಪ, ತಹಶೀಲ್ದಾರ್ 4. ಶ್ರೀ ಎನ್. ಸುಬ್ಬಣ್ಣ, ತಹಶೀಲ್ದಾರ್ (ಈಗ ನಿವೃತ್ತರು)
5. ಶ್ರೀ ಲಾಲಂಕಿ ರವಿ, ಶಿರಸ್ತೇದಾರ್ 6. ಶ್ರೀ ಟಿ.ಎನ್. ಲಕ್ಷ್ಮಣ, ರಾಜಸ್ವ ನಿರೀಕ್ಷಕರು (ಈಗ ನಿವೃತ್ತರು)
7. ಶ್ರೀ ವಿ.ಜಿ. ಗೋಪಾಲಕೃಷ್ಣ, ಗ್ರಾಮಲೆಕ್ಕಿಗ 8. ಶ್ರೀ ಎಂ.ಡಿ. ನಾಗರಾಜು, ರಾಜಸ್ವ ನಿರೀಕ್ಷಕರು

ವಿಚಾರಣಾಧಿಕಾರಿಯವರು ಇಲಾಖಾ ವಿಚಾರಣೆಯನ್ನು ಜರುಗಿಸಿ, ಮೇಲೆ ಕ್ರ.ಸಂ.2ರಲ್ಲಿ ಓದಲಾದ ದಿ:18.5.2005ರ ಪತ್ರದೊಂದಿಗೆ ತಮ್ಮ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ಶ್ರೀ ವಿ.ಜಿ. ಗೋಪಾಲಕೃಷ್ಣ, ಗ್ರಾಮ ಲೆಕ್ಕಿಗ, ಇವರ ವಿರುದ್ಧ ಆರೋಪವು ಸಾಬೀತಾಗಿರುವುದಾಗಿ ವಿಚಾರಣಾಧಿಕಾರಿಗಳು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ.

ಸರ್ಕಾರವು ವಿಚಾರಣಾ ವರದಿಯನ್ನು ಕುಲಂಕಷವಾಗಿ ಪರಿಶೀಲಿಸಿದೆ. ಶ್ರೀ ವಿ.ಜಿ. ಗೋಪಾಲಕೃಷ್ಣ ಗ್ರಾಮ ಲೆಕ್ಕಿಗ ಇವರ ವಿರುದ್ಧದ ಆರೋಪವು ಸಾಬೀತಾಗಿದೆ ಎಂದು ವಿಚಾರಣಾ ವರದಿಯಲ್ಲಿ ಕಂಡು ಬಂದ ಕಾರಣ ಸದರಿಯವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8ರಲ್ಲಿನ ಯಾವುದಾದರೂ ಒಂದು ದಂಡನೆಯನ್ನು ವಿಧಿಸಲು ಸರ್ಕಾರವು ನಿರ್ಧರಿಸಿ ಕ್ರ.ಸಂ.(3)ರಲ್ಲಿ ಓದಲಾದ ದಿ:1.12.2005ರಲ್ಲಿ ಶ್ರೀ ವಿ.ಜಿ. ಗೋಪಾಲಕೃಷ್ಣರವರಿಗೆ ಎರಡನೇ ಕಾರಣ ಕೇಳುವ ನೋಟೀಸನ್ನು ವಿಚಾರಣಾ ವರದಿಯ

ಪ್ರತಿಯೊಂದಿಗೆ ನೀಡಲಾಗಿತ್ತು. ಇದಕ್ಕೆ ಉತ್ತರವಾಗಿ ಆರೋಪಿತ ನೌಕರರು ಕ್ರ.ಸಂ(4)ರಲ್ಲಿ ಓದಲಾದ ದಿ:23.12.2005ರ ಲಿಖಿತ ಸಮಜಾಯಿಷಿಯಲ್ಲಿ ತಮ್ಮನ್ನು ಆರೋಪ ಮುಕ್ತಗೊಳಿಸಬೇಕೆಂದು ಕೋರಿದ್ದಾರೆ.

ಈ ಪ್ರಕರಣದಲ್ಲಿನ ವಿಚಾರಣಾ ವರದಿ ಹಾಗೂ ಆರೋಪಿತ ನೌಕರರು ಸಲ್ಲಿಸಿರುವ ಲಿಖಿತ ಹೇಳಿಕೆ ಇವುಗಳನ್ನು ದಾಖಲೆಗಳ ಆಧಾರದಿಂದ ಪರಿಶೀಲಿಸಲಾಗಿ ಶ್ರೀ ವಿ.ಜಿ. ಗೋಪಾಲಕೃಷ್ಣ, ಗ್ರಾಮ ಲೆಕ್ಕಿಗ ಇವರು ಕರ್ತವ್ಯಚ್ಯುತಿ ಎಸಗಿರುವುದು ಸಾಬೀತಾಗಿರುವ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ದಂಡನೆ ವಿಧಿಸಿ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ:38:ಎಡಿಇ:2001, ಬೆಂಗಳೂರು, ದಿನಾಂಕ: 26ನೇ ಜೂನ್ 2006**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಶ್ರೀ ವಿ.ಜಿ. ಗೋಪಾಲಕೃಷ್ಣ, ಗ್ರಾಮಲೆಕ್ಕಿಗ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ 8(ii) ರನ್ವಯ ವಾಗ್ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 1096

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎರ್ರಿಸ್ವಾಮಿ, ಸಿಹೆಚ್‌ಸಿ-139, ತೋರಣಗಲ್ಲು ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ ರವರ ಪರಿಷ್ಕರಣ ಮೇಲ್ಮನವಿ ಅರ್ಜಿ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಳ್ಳಾರಿ, ಇವರ ಆದೇಶ ಸಂಖ್ಯೆ: 8/ಇವಿ/2003 ಜಿ.ಆ ಸಂಖ್ಯೆ: 82/2003-04, ದಿನಾಂಕ:13.2.2004.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ:05/ಅಪೀಲು/2004-05, ಓಬಿ ಸಂಖ್ಯೆ:169/2004-05, ದಿನಾಂಕ: 26.2.2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:9.5.2005.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/108/2005, ದಿನಾಂಕ:31.12.2005.

**ಪ್ರಸ್ತಾವನೆ:**

ಶ್ರೀ ಎರ್ರಿಸ್ವಾಮಿ, ಸಿಹೆಚ್‌ಸಿ-139, ಗಾಂಧಿನಗರ ಪೊಲೀಸ್ ಠಾಣೆ, (ಹಾಲಿ ತೋರಣಗಲ್ಲು ಪೊಲೀಸ್ ಠಾಣೆ) ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ನೀವು ದಿನಾಂಕ:22.3.2003ರಂದು ರಾತ್ರಿ ಬಳ್ಳಾರಿ ನಗರದ ಗಾಂಧಿನಗರ ಮಾರ್ಕೆಟ್ ಹತ್ತಿರ ಶಿವ ಕಾಂಪ್ಲೆಕ್ಸ್ ಎದುರುಗಡೆ, ಸಾರ್ವಜನಿಕ ಸ್ಥಳದಲ್ಲಿ ಇತರೆ 7 ಜನರೊಂದಿಗೆ ಅಂದರೆ-ಬಾಹರ್ ಇಸ್ಪೀಟ್ ಆಟವಾಡುತ್ತಿದ್ದಾಗ, ರಾತ್ರಿ 8-45ರ ಸಮಯದಲ್ಲಿ ಪೊಲೀಸ್‌ರು ದಾಳಿ ಮಾಡಿ, ನಿಮ್ಮ ವಿರುದ್ಧ ಗಾಂಧಿನಗರ ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ:31/2003 ಕಲಂ 87 ಕೆ.ಪಿ.ಆಕ್ಟ್ ದಾಖಲಾಗಿರುತ್ತದೆ. ನೀವು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು, ಸಾರ್ವಜನಿಕ ಸ್ಥಳದಲ್ಲಿ ಅಂದರ್-ಬಾಹರ್ ಇಸ್ಪೀಟ್ ಜೂಜಾಟ್‌ದಲ್ಲಿ ತೊಡಗಿ ಅತೀವ ದುರ್ನಡತೆ ಹಾಗೂ ಶಿಸ್ತಿನ ಪೊಲೀಸ್ ಇಲಾಖೆಗೆ ಅಗೌರವ ಉಂಟಾಗುವಂತೆ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಳ್ಳಾರಿ, ಇವರ ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:13.2.2004ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರುವಂತೆ ಒಂದು ವರ್ಷ ಕಾಲ ತಡೆ ಹಿಡಿದು ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:26.2.2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಲಾಗಿದೆ. ಅರ್ಜಿದಾರರು ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿದ್ದು, ಪೊಲೀಸ್ ಇಲಾಖೆಗೆ ಅಗೌರವ ತರುವ ರೀತಿಯಲ್ಲಿ ನಡೆದುಕೊಂಡಿರುವುದೂ, ಸಾರ್ವಜನಿಕ ಸ್ಥಳದಲ್ಲಿ ಅಂದರ್-ಬಾಹರ್ ಆಡುತ್ತಿದ್ದವರನ್ನು ತಡೆಯುವುದೂ ಇವರ ಕರ್ತವ್ಯವಾಗಿದ್ದರೂ, ನಿಂತು ನೋಡುವುದೂ ಸಹ ಇವರ ದುರ್ನಡತೆಗೆ ಸಾಕ್ಷಿ ಆಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿನ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷ್ಯತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 157 ಪೊಸಿಅ 2006, ಬೆಂಗಳೂರು, ದಿನಾಂಕ: 29ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎರ್ರಿಸ್ವಾಮಿ, ಸಿಹೆಚ್‌ಸಿ-139, ತೋರಣಗಲ್ಲು ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:9.5.2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಪಿ.ಆರ್. 1097

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್. ಗೋಪಾಲಕೃಷ್ಣ, ಮಾಜಿ ಹೆಚ್‌ಸಿ-167, ಚಿತ್ರದುರ್ಗ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ, ಇವರ ಆದೇಶ ಸಂಖ್ಯೆ: ಸಿಬ್ಬಂದಿ/1/ಇವಿ-01/2004-05 ಓಬಿ ಸಂಖ್ಯೆ: 495/2004-05, ದಿನಾಂಕ:15.2.2005.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ:52/ಅಪೀಲು/2004-05, ಓಬಿ ಸಂಖ್ಯೆ:196/2004-05, ದಿನಾಂಕ: 23.3.2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:26.4.2005.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/65/2005, ದಿನಾಂಕ:3.11.2005.
5. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ/37/CNS 06, ದಿನಾಂಕ:9.6.2006.

**ಪ್ರಸ್ತಾವನೆ:**

ಶ್ರೀ ಎಸ್. ಗೋಪಾಲಕೃಷ್ಣ, ಸಿಹೆಚ್‌ಸಿ-167 ಚಿತ್ರದುರ್ಗ ಗ್ರಾಮಾಂತರ ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಸಿಹೆಚ್‌ಸಿ-167 ಎಸ್. ಗೋಪಾಲಕೃಷ್ಣ ಆದ ನೀವು ಈ ಹಿಂದೆ ರಾಂಪುರ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ:7.1.2002 ರಿಂದ 10.1.2002 ರವರೆಗೆ (ದಿನಾಂಕ:6.1.2002 ರಿಂದ 9.1.2002 ರವರೆಗೆ ಸುಳ್ಳು ದಾಖಲೆ) ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿ, ನಂತರ ದಿನಾಂಕ:13.1.02 ರಿಂದ 19.1.02ರವರೆಗೆ (ದಿನಾಂಕ:12.1.02 ರಿಂದ 21.1.02 ರವರೆಗೆ ಸುಳ್ಳು ದಾಖಲೆ) ಗೈರು ಹಾಜರಾಗಿದ್ದು, ಮೇಲ್ಕಂಡ ಎಲ್ಲಾ ದಿನಗಳನ್ನು ರಜೆ ಮಂಜೂರಾತಿ ಬಗ್ಗೆ, ರಜೆ ಅರ್ಜಿ ಮತ್ತು LR ಫಾರಂ ಅನ್ನು ತಾವೇ ಸ್ವತಃ ತೆಗೆದುಕೊಂಡು ಹೋಗಿ, ನಂತರ ಸದರಿ ಮೇಲ್ಕಂಡ ರಜೆಯನ್ನು ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ ಇವರ ಕಚೇರಿಯಿಂದ ಮಂಜೂರಾದ ಬಗ್ಗೆ ಮೇಲಾಧಿಕಾರಿಗಳ ಖೋಟಾ ರುಜುವನ್ನು ಮಾಡಿ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ ಜಿಲ್ಲೆ, ಇವರ ಮೊಹರನ್ನು ಹಾಕಿ, ಮಂಜೂರಾತಿ ಮೆಮೊವನ್ನು ಪೊಲೀಸ್ ಠಾಣೆಗೆ (ರಾಂಪುರಠಾಣೆ) ನೀಡಿರುತ್ತಾರೆ. ಈ ಕಚೇರಿಯಿಂದ ರಜೆ ಮಂಜೂರಾದ ಮೆಮೋ ಸಂಖ್ಯೆ:ಸಿಬ್ಬಂದಿ (2) 78/2001-02 ದಿನಾಂಕ:1.2.2002 ನೇದ್ದನ್ನು ಸುಳ್ಳು ದಾಖಲೆ ಸೃಷ್ಟಿಸಿ, ಇಲಾಖೆಗೆ ಕುಂದು ತರುವಂತಹ ಹಾಗೂ ಹೆಚ್ಚಿನ ರೀತಿಯಲ್ಲಿ ಶಿಸ್ತಿನಿಂದ ಹಾಗೂ ದುರ್ನಡತೆ ಪ್ರದರ್ಶಿಸಿರುತ್ತಾರೆ. ಹಾಗೂ ಸದರಿಯವರು ಮೇಲಾಧಿಕಾರಿಗಳಿಗೆ ನೇರವಾಗಿ ಅರ್ಜಿಗಳನ್ನು, ಪತ್ರಗಳನ್ನು ಬರೆಯುವ ಹವ್ಯಾಸವುಳ್ಳವರಾಗಿದ್ದು, ಪಿಎಸ್‌ಐ ರಾಂಪುರ ಠಾಣೆ ಯವರ ವರದಿ ಪ್ರಕಾರ ಪೊಲೀಸ್ ಠಾಣೆಯಲ್ಲಿ ಸುಳ್ಳು ದಾಖಲೆಗಳನ್ನು ಸೃಷ್ಟಿಸುವ ಹವ್ಯಾಸವುಳ್ಳವರಾಗಿದ್ದು, ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಒಬ್ಬ ಜವಾಬ್ದಾರಿಯುತ ಪೊಲೀಸ್ ಸಿಬ್ಬಂದಿಯಾಗಿ, ಮೇಲಾಧಿಕಾರಿಗಳ ಖೋಟಾ ರುಜುವನ್ನು ಮಾಡಿ, ಹೆಚ್ಚಿನ ರೀತಿಯಲ್ಲಿ ಅಶಿಸ್ತಿನಿಂದ ವರ್ತಿಸಿ, ಕರ್ತವ್ಯದಲ್ಲಿ ಘೋರ ದುರ್ನಡತೆ ಹಾಗೂ ಅತೀವ ಬೇಜವಾಬ್ದಾರಿತನ ಪ್ರದರ್ಶಿಸಿದ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು, ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:15.2.2005ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿ, ಅಮಾನತ್ತಿನ ಅವಧಿ ದಿನಾಂಕ:1.2.2004 ರಿಂದ 25.3.2004ರವರೆಗೆ ಅಮಾನತ್ತೆಂದೇ ಪರಿಗಣಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:23.3.2005ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು 1979ರಲ್ಲಿ ಸೇವೆಗೆ ಸೇರಿದ್ದು, ಯಾವುದೇ ಗುರುತರ ಆರೋಪ ಎಸಗಿರುವುದಿಲ್ಲ. ಹಲವು ಬಾರಿ ತಮ್ಮ ಕರ್ತವ್ಯ ನಿಷ್ಠೆಗೆ ನಗದು ಬಹುಮಾನಗಳನ್ನು ಪಡೆದಿರುತ್ತಾರೆ. ಕೇವಲ ಹದಿನೈದು ದಿನಗಳ ಅನಧಿಕೃತ ಗೈರು ಹಾಜರಿಗೆ ಸೇವೆಯಿಂದ ವಜಾ ಮಾಡಿದ ದಂಡನೆ ದಿನಾಂಕ:14.9.2001ರ ಸರ್ಕಾರಿ ಸುತ್ತೋಲೆ ರೀತ್ಯಾ ಅತೀ ಹೆಚ್ಚಿನದೆಂದು ಪರಿಗಣಿಸಿ, ಶಿಸ್ತು ಪ್ರಾಧಿಕಾರಿಯ ದಂಡನಾದೇಶವನ್ನು ಮಾರ್ಪಡಿಸಿ ಅರ್ಜಿದಾರರನ್ನು ಕಡ್ಡಾಯ ನಿವೃತ್ತಿಗೊಳಿಸಲು ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲು ಸರ್ಕಾರ ಉದ್ದೇಶಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:9.6.2006ರ ಪತ್ರದಲ್ಲಿ ಶಿಸ್ತು ಪ್ರಾಧಿಕಾರಿಯ ದಂಡನಾದೇಶವನ್ನು ಮಾರ್ಪಡಿಸಿ, ಸರ್ಕಾರ ಉದ್ದೇಶಿಸಿದ ಮಾರ್ಪಾಡಿಗೆ ತನ್ನ ಸಹಮತಿ ನೀಡಿರುತ್ತದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 115 ಪೊಸಿಅ 2006, ಬೆಂಗಳೂರು, ದಿನಾಂಕ: 7ನೇ ಜುಲೈ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:15.2.2005ರ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ ಇವರ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ, ಶ್ರೀ ಎಸ್. ಗೋಪಾಲಕೃಷ್ಣ, ಸಿಹೆಚ್‌ಸಿ-167 ಚಿತ್ರದುರ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:26.4.2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, 1) ಅರ್ಜಿದಾರರನ್ನು ಕಡ್ಡಾಯ ನಿವೃತ್ತಿಗೊಳಿಸಿದೆ. 2) ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:9.6.2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 1098

**ವಿಷಯ:** ಶ್ರೀ ವಿ.ಬಿ. ಹೂಂಡದ, ಎಎಸ್‌ಐ, ಕಿತ್ತೂರ ಪೊಲೀಸ್ ಠಾಣೆ, ಬೆಳಗಾಂ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರ ಆದೇಶ ಸಂಖ್ಯೆ: ಸಿಬ್ಬಂದಿ/2/ಇವಿ-10/2002/ಅಪು ಸಂಖ್ಯೆ:317/2004, ದಿನಾಂಕ:22.5.2004.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಅಪೀಲು/24/ಉವ/2004, ದಿನಾಂಕ: 14.11.2004.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:28.1.2005.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/59/2005, ದಿನಾಂಕ:25.7.2005.

**ಪ್ರಸ್ತಾವನೆ:**

ಶ್ರೀ ವಿ.ಬಿ. ಹೂಂಡದ, ಎಎಸ್‌ಐ ಕಿತ್ತೂರು ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಆಪಾದಿತ ಪೊಲೀಸ್ ಅಧಿಕಾರಿ ಶ್ರೀ ವಿ.ಬಿ. ಹೂಂಡದ, ಎಎಸ್‌ಐ, ರಾಯಭಾಗ ಪೊಲೀಸ್ ಠಾಣೆಯವರಾದ ನೀವು ಈ ಹಿಂದೆ ಕಿತ್ತೂರು ಪೊಲೀಸ್ ಠಾಣೆಯಲ್ಲಿ ಎಎಸ್‌ಐ ಅಂತಾ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ:31.5.2001ರಂದು ಬೈಲಹೊಂಗಲ ಗ್ರಾಮದ ಶ್ರೀ ಆಸ್ಪಾಕ್ ಅಹ್ಮದ್ ಅಕ್ಷರಸಾಬ ಮಿರ್ಜನ್ನವರ ಇವರ ಸರ್ಕಾರದ ಅಧಿಕೃತ ಕೆಲಸ ಮಾಡಿಕೊಡಲು ಅಂದರೆ ಟ್ರಕ್ ಚಾಲಕ ಹಾಗೂ ಬಿಡುಗಡೆ ಮಾಡಲು ಸದರಿಯವರಿಂದ ರೂ.2500/-ಗಳ ಹಣವನ್ನು ಅಕ್ರಮವಾಗಿ ಸಂಭಾವನೆಯಾಗಿ ಪಡೆಯುತ್ತಿದ್ದಾಗ, ಲೋಕಾಯುಕ್ತರ ಬಲೆಗೆ ಸಿಲುಕಿ ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದೆ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು,ಬೆಳಗಾವಿ ,ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:22.5.2004ರ ಆದೇಶದಲ್ಲಿ ಅರ್ಜಿದಾರರ ಮೂರು ಹಂತ ವಾರ್ಷಿಕ ವೇತನ ಬಡ್ತಿಗಳನ್ನು ಕೆಳಗಿಳಿಸಿ, ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ತಡೆಹಿಡಿದು, ಹೊಸದಾಗಿ ವಾರ್ಷಿಕ ವೇತನ ಬಡ್ತಿ ಗಳಿಸುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ ಬೆಳಗಾವಿ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:14.11.2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡು ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧ ಬೆಳಗಾವಿ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಅಪರಾಧ ಸಂಖ್ಯೆ:09/2001ರಲ್ಲಿ ದಾಖಲಾಗಿದ್ದು, ನ್ಯಾಯಾಲಯದಲ್ಲಿ ಪ್ರಕರಣವು ಮುಕ್ತಾಯಗೊಂಡಿದೆ. ಆದರೆ ಇಲಾಖಾ ವಿಚಾರಣೆಯಲ್ಲಿ ಆರೋಪವು ಸಾಬೀತಾಗಿದ್ದ ಕಾರಣ ಶಿಸ್ತು ಪ್ರಾಧಿಕಾರಿ ದಂಡನೆ ವಿಧಿಸಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಶಿಸ್ತನ್ನು ಉಲ್ಲಂಘಿಸಿರುವುದು ದುರ್ನಡತೆಗೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ,ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 322 ಪೊಸಿಅ 2005, ಬೆಂಗಳೂರು, ದಿನಾಂಕ: 29ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿ.ಬಿ. ಹೊಂಡದ, ಎಎಸ್‌ಐ ಕಿತ್ತೂರು ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:28. 1.2005ರ ಪರಿಷ್ಕರಣ ಮೆಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಸಿ. ಬಸವರಾಜು

ಪಿ.ಆರ್. 1099

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## FOREST ENVIRONMENT & ECOLOGY SECRETARIAT

**Sub:** JBIC Phase II-Assisted Karnataka Sustainable Forest Management & Bio-diversity Conservation Project-Sanction of the Annual Plan of Operation for the year 2006-07.

**Read:**
1. G.O.No; FEE 279 FAP 2003, dated:23.5.2005.
2. G.O. No: FEE 162 FAP 2005, dated:12.9.2005.
3. Letter No:A2/KSFMBC/APO.CR-18/2006-07. dated:20/21/06.2006 from the Chief Conservator of Forests (S.F.)., Bangalore.

**Preamble:-**

In G.O. referred at (1) above, Karnataka Sustainable. Forest Management & Bio-diversity Conservation Project has been approved for implementation from 2005-06 to 2012-2013 with a total outlay of Rs. 745.00 crores in the State over a period of 8 years with certain conditions.

In G.O. referred at (2) above, sanction has been accorded for Annual Plan Operations for the year 2005-06 with an outlay Rs. 77.20 crores under the JBIC Phase II-Assisted Karnataka Sustainable Forest Management & Bio-diversity Conservation Project.

In the letter referred at (3) above, the Chief Conservator of Forests (S.F.) has infomed that the Special Empowered Committee for according sanction under the JBIC Phase II-Assisted Karnataka Sustainable Forest Management & Bio-diversity Conservation Project has in its 3rd meeting held on 9.6.2006 approved the Annual Plan Operation under the Project for the year 2006-07 with an outlay of Rs. 108.70 crores as detailed in Annexure and also approved for utilisation of the amount not utilised during 2005-06 amounting to 16.488 crores during the year 2006-07 and has sought issue of Government Order in this regared.

The proposal has been examined and the Government has decided to approve the backog works of 2005-06 amounting to Rs. 16.488 crores and Annual Plan of Operations for the year 2006-07 with an outly of Rs. 108.70 crores. Hence the order.

**Government Order No. FEE 97 FAP 2006, Bangalore, Dated: 19th July 2006**

In the circumstances explained above, sanction is here by accorded for executing the backlog works of 2005-06 amounting to Rs.16.483 crores and the Annual Plan Operations for the year 2006-07 with an outlay of Rs. 108.70 crores (One Hundred Eighty Crores and Seventy lakhs Rupees only) as detailed in the Annexure A & B to the Government Order under the JBIC Phase I-Assisted Karnataka Sustainable Forest Management & Bio-diversity Conservation Project.

This order is in accodance with the decision of the 3rd meeting of the Special Empowered Committee held on 9.6.2006.

By Order and in the name of the Governor of Karnataka,
**S.R. VATSALA**
Under Secretary to Government,
Forest, Environment & Ecology Department.

**ANNEXRE-A TO G.O.No. FEE 97 FAP 2005, DATED: 19TH July 2006**
**JBIC Phase-II assisted KSFMBC Project (ID P-163)**
**Backlog Programme of works for 2005-06**

(Rs. in crores)

| Sl. No. | Components / Activities | Annual Achievement (Financial) |
|---|---|---|
| I | Afforestation | 3.118 |
| II | Farm Forestry | 0.458 |
| III | Soil Conservation and Water Harvesting Measures | 3.170 |
| IV | Protected Area Management & Bio-diversity Conservation | 1.151 |
| V | Joint Forest Planning & Management | 0.565 |
| VI | Supporting ctivities for Forest Management Viz., Researh & Training | 6.395 |
| VII | Basic Infrastructure Support for Field Work viz, Vehicles, Computers, Buildings, Telephone, Broadband internet etc. | 1.631 |
| | **Total** | **16.488** |

**S.R. VATSALA**
Under Secretary to Government,
Forest, Environment & Ecology Department.

**ANNEXURE-B TO G.O. NO. FEE 97 FAP 2005, DATED: 19.7.2006**
**JBIC Phase II assisted KSFMBC Project (ID P-163) Programme of works for 2006-07**

| | Sl. No. | Activity | Unit | Unit Cost (in Rs.) | 2006-07 | |
|---|---|---|---|---|---|---|
| | | | | | Physical | Fin |
| | 1 | 2 | 3 | 4 | 5 | 6 |
| **I** | | **AFFORESTATION** | | | | |
| | A | Plantation Models | | | | |
| | M-1 | Ecological Restoration through Natural Regeneration-Ist year Maint | Ha | 1,493 | 10,024 | 1.497 |
| | M-1 | Ecological Restoration through Natural Regeneration-Monsoon Work | Ha | 6,055 | 6,000 | 3,633 |

| | 1 | 2 | 3 | 4 | 5 | 6 |
|---|---|---|---|---|---|---|
| | M-2 | Assisted Natural Regeneration-Advance Work | Ha | 10,800 | 4,600 | 4,968 |
| | M-3 | Plantation for Timber Production-Advance Work | Ha | 16,228 | 8,000 | 12,982 |
| | M-4 | Plantations for Fuel Wood and Small Timber Production-Raising Plant | Ha | 9,100 | 13,872 | 12,624 |
| | M-4 | Plantations for Fuel Wood and Small Timber Production-advance Work | Ha | 14,595 | 8,000 | 11,676 |
| | M-5 | NTFP plantations-Advance Work | Ha | 10,302 | 6,000 | 6,181 |
| | M-6 | School Forest-Advance Work | Ha | 6,600 | 300 | 0.198 |
| | M-7 | Restoration of Mangrove Areas-Monsoon Work | Ha | 23,000 | 450 | 1,035 |
| | | **Sub Total** | | | | **64.794** |
| | **B.** | **Farm Forestry** | | | | |
| | M-8a | Raising Demonstration Plots in Farmers land | Ha | 12,659 | 400 | 0.506 |
| | M-8b | Seed Collection for supply to Farmers | Kgs | 25.00 | 50,000 | 0.125 |
| | M-8c | Seedlings Raising in bigger PBs (8"x12") to Farmers | Nos. | 6.00 | 100,000 | 0.060 |
| | M-8c | Seedlings distribution in bigger PBs (8"x12") to Farmers | Nos. | 1.60 | 200,000 | 0.032 |
| | M-8d | Seedlings Raising in small PBs (5" x 8") to | Nos. | 1.80 | 8,000,000 | 1.440 |
| | M-8d | Seedlings distribution in small PBs (5"x8") to Farmers | Nos. | 0.60 | 11,000,000 | 0.660 |
| | | Forest Motivators Honorarium | Nos. | 1,000 | 1,100 | 1.320 |
| | | Workshops discussion / Seminar on Farm | Nos. | 45,000 | 10 | 0.045 |
| | | Publication of leaflets, pamplets, posters & documentation of success stores etc. | Nos. | 50,000 | 8 | 0.040 |
| | | Rewards and incentives for successful farmers | Nos. | 1,050 | 200 | 0.21 |
| | | **Sub Total** | | | | **4.249** |
| | C. | Soil Conservation & Water Harvesting Measures | | | 32,600 | 10.540 |
| | | **Total** | | | | **69,583** |
| **II** | | **Protected Area Management & Bio-diversity Conservation** | | | | |
| | a. | New Fireline Formation | Km. | 937.71 | 200 | 0.019 |
| | b. | Habitat Improvement | Ha. | 1,000 | 500 | 0.050 |
| | | Eco-development works | | | | |
| | a. | Vaccination, fodder development in the fringe village including biodiversity conservation | Nos | 35,000 | 50 | 0.175 |
| | b. | New Elephant Proof Trench (EPT) | Km. | 144.000 | 50 | 0.720 |
| | c. | EPT Maintenance | Km. | 20,0000 | 80 | 0.160 |
| | | **Total** | | | | **1.124** |
| **III** | | **Joint Forest Planning & Management** | | | | |
| | 1 | Formation of VFCs (383 ew) | Nos. | 47,000 | 383 | 1,800 |
| | 2 | I year Old VFCs (417) | Nos. | 45,000 | 417 | 1,877 |
| | 3 | JFPM Facilitator Remuneration | Nos. | 12,000 | 60 | 0.864 |

| | 1 | 2 | 3 | 4 | 5 | 6 |
|---|---|---|---|---|---|---|
| | 4 | JFPM Co-ordinator Remuneration | Nos. | 50,000 | 1 | 0.060 |
| | 5 | Lead NGO Remuneration | Nos. | 20,000 | 5 | 0.120 |
| | | **Total** | | | | **4,721** |
| **IV** | | **Supporting Activities for Forest Management** | | | | |
| | 1 | Working Plans | | | | |
| | a. | GIS / MIS | Nos. | | | 0.550 |
| | 2. | Research-Operation Cost | | | | |
| | 1. | Clonal Seed Orchards-Planting | Ha. | 22,000 | 115 | 0.253 |
| | 2. | Clonal Seed Orchards-Advance Work | Ha. | 22,000 | 115 | 0.253 |
| | 3. | Seed Orchards-Planting | Ha. | 17,000 | 150 | 0.255 |
| | 4. | Seed Orchards-Advance Work | Ha. | 15,672 | 150 | 0.235 |
| | 5. | Seed Production Areas-Ist Year Maintenance (Teak) | Ha. | 4,000 | 100 | 0.040 |
| | 6. | Seed Production Areas-Formation (Teak) | Ha. | 18,000 | 100 | 0.180 |
| | 7. | Seed Production Areas-Ist Year Maintenance (Non-Teak) | Ha. | 4,000 | 300 | 0.120 |
| | 8. | Seed Production Areas-Formation (Non-Teak) | Ha. | 9,500 | 300 | 0.285 |
| | 9. | CMA/VMG-Planting | Ha. | 25,000 | 125 | 0.313 |
| | 10. | CMA/VMG-Advance Work | Ha. | 24,250 | 125 | 0.303 |
| | 11. | Germ Plasam Bank-Planting | Ha. | 16,000 | 25 | 0.040 |
| | 12. | Germ Plasam Bank-Advance Work | Ha. | 17,300 | 25 | 0.045 |
| | 13. | Species Trail Plot & Progency Trail-Planting | Ha. | 16,000 | 75 | 0.120 |
| | 14. | Speices Trail Plot & Progeny Trail-Advance Work | Ha. | 17,300 | 75 | 0.130 |
| | 15. | Identification & Maintenance of Plus Trees | Ha. | 2,500 | 800 | 0.200 |
| | 16. | Research Equipments-Mist Chamber | Ha. | 100,000 | 4 | 0.040 |
| | | **Sub Total** | | | | **2.810** |
| | | **Research Studies** | | | | |
| | 17. | Ecological | Ha. | 120,000 | 2 | 0.024 |
| | 18. | Socio Economic | Ha. | 50,000 | 4 | 0.020 |
| | 19. | Silvicultural Research | Ha. | 100,000 | 3 | 0.030 |
| | 20. | Research Fellowship | Ha. | 50,000 | 4 | 0.020 |
| | 21. | Research (Contract) | Ha. | 100,000 | 3 | 0.020 |
| | 22. | Dissemination / Publication | Nos. | 100,000 | 3 | 0.030 |
| | | **Sub Total** | | | | **0.144** |
| | 3 | Training-Local Training | | | | |
| | a. | VFC & SHG's Members | | | | |
| | 1 | 1 Week Training (100 Persons per Batch) | Batch | 120,000 | 300 | 3,600 |
| | 2 | 2 Weeks Training (100 Persons per Batch) | Batch | 200,000 | 90 | 1,800 |
| | 3 | 2 Weeks Training-VFC Presidents & Executives (60 Persons per Batch) | Batch | 150,000 | 55 | 0,825 |
| | 4 | 1 Week Training-NGO's (25 Persons per Batch) | Batch | 100,000 | 4 | 0.040 |

| | 1 | 2 | 3 | 4 | 5 | 6 |
|---|---|---|---|---|---|---|
| | 5 | Foresters / Forest Guard (6 Weeks in Phase of 2 Weeks each, 30 persons per batch) | Batch | 200,000 | 30 | 0.600 |
| | 6 | Range Forest Officers (6 Weeks in Phase of 2 weeks each, 30 persons Per batch) | Batch | 200,000 | 30 | 0.600 |
| | 7 | Officers (CF / DCF / ACF) (3 Weeks in Phase of a week each, 25 persons per batch) | Batch | 175,000 | 8 | 0.140 |
| | 8 | Senior Officers outside the State | Nos. | 14,000 | 160 | 0.224 |
| | | **Sub Total** | | | | **7.829** |
| | 3.1 | Training-Overseas Training | | | | |
| | a. | 2-2 Months | Nos. | 800,000 | 6 | 0.480 |
| | | **Sub Total (Local & Overseas Training)** | | | | **8.309** |
| | 4 | Consultancy | | | | |
| | 1 | JFPM | Nos. | 50,000 | 1 | 0.005 |
| | 2 | Bio-diversity | Nos. | 50,000 | 2 | 0.010 |
| | | Sub Total | | | | 0.015 |
| | | Total | | | | 11.828 |
| **V** | | **Basic Infrastructure Support for Field Work** | | | | |
| | 1 | Vehicles | Nos. | 468,000 | 22 | 1.030 |
| | 2 | Computers | Nos. | 50,000 | 74 | 0.370 |
| | 3 | Telephone | Nos. | 9,700 | 48 | 0.047 |
| | 4 | Broadband Internet / e-governace | Nos. | 85,000 | 7 | 0.060 |
| | 5 | Rsidential-Buildings | Nos. | 545.000 | 10 | 0.545 |
| | 6 | Non Residential Buildings | Nos. | 1,020,000 | 5 | 0.510 |
| | | **Sub Total** | | | | **2,561** |
| | | Office Equipment | | | | |
| | 1 | Cable Broadband Internet connection facility service | Nos. | 100,000 | 2 | 0.020 |
| | 2 | Dialup Internet Conmnection Kit | Nos. | 2,200 | 18 | 0.004 |
| | | **Sub Total** | | | | **0.024** |
| | | **Total** | | | | **2,585** |
| VI | | Repair, Maintenance and Office Expenses (RMOE) | | | | |
| | 1 | Office Expenditure | Nos. | 150,000 | 38 | 0.570 |
| | 2 | Fuel Expenditure | Nos. | 150,000 | 80 | 1,200 |
| | 3 | Travel Allowances | Nos. | 100,000 | 40 | 0.400 |
| | 4 | Repairs | Nos. | 50,000 | 10 | 0.050 |
| | 5 | Building Maintenance | Nos. | 30,000 | 200 | 0.600 |
| | | **TOTAL** | | | | **2.820** |
| VII | | Salary of the Re-deployed Staff | Nos. | | 2,053 | 16.043 |

**S.R. VATSALA**

P.R. 1113

Under Secretary to Government,
Forest, Environment & Ecology Department.

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಮುದ್ದೇಬಿಹಾಳ್ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯಕ್ಕೆ ಸಹಾಯಕ ಸರ್ಕಾರಿ ವಕೀಲರ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಲಾ 121 ಎಲ್‌ಸಿಇ:99 ದಿನಾಂಕ :8.11.2000.
2. ಪತ್ರ ಸಂಖ್ಯೆ :ಆರ್‌ಬಿ 1ಲಾ :ಸಿಆರ್ 445:2004-05 ದಿನಾಂಕ:25.3.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಸಂಬಂಧಪಟ್ಟ ಹುದ್ದೆಗಳೊಂದಿಗೆ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ಹಾಗೂ ಜೆ.ಎಂ.ಎಫ್.ಸಿ. ನ್ಯಾಯಾಲಯ ಸ್ಥಾಪಿಸಲು ಮಂಜೂರಾತಿ ನೀಡಲಾಗಿತ್ತು. ಆ ನ್ಯಾಯಾಲಯಕ್ಕೆ ಸಹಾಯಕ ಸರ್ಕಾರಿ ವಕೀಲರ ಅವಶ್ಯಕತೆ ಇರುವುದಾಗಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ, ಇವರು ಅಭಿಪ್ರಾಯ ಪಟ್ಟಿರುವುದಾಗಿ ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿ, ವಿಜಾಪುರ ಇವರು ತಿಳಿಸಿರುತ್ತಾರೆ.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಲಾ:99 ಎಲ್‌ಎಜಿ 2005, ಬೆಂಗಳೂರು, ದಿನಾಂಕ:26ನೇ ಜೂನ್ 2006**

ಮುದ್ದೇಬಿಹಾಳ್ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯಕ್ಕೆ ಒಂದು ಸಹಾಯಕ ಸರ್ಕಾರಿ ವಕೀಲರ ಹುದ್ದೆಯನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಿದೆ.

ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು (1911) ರ ಷೆಡ್ಯೂಲ್ 6ರ ಹೆಚ್ಚುವರಿ ಸಹಾಯಕ ಸರ್ಕಾರಿ ವಕೀಲರ ಪಟ್ಟಿಗೆ ಕ್ರಮ ಸಂಖ್ಯೆ:48ಯಾಗಿ ಸೇರಿಸಲು ಆದೇಶಿಸಿದೆ.

ಇದಕ್ಕೆ ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ:ಆಇ 171 ವೆಚ್ಚ7:2006 ದಿನಾಂಕ:2.6.2006ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗಂಗನರಸಯ್ಯ**

ಪಿ.ಆರ್. 1083

ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ-1)

ಕಾನೂನು, ನ್ಯಾಯ ಮತ್ತು ಮಾನವಹಕ್ಕುಗಳ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಕನ್ನಡ ಅಭಿವೃದ್ಧಿ ಪ್ರಾಧಿಕಾರದಲ್ಲಿ ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಬಿ.ಎನ್. ಜಯಶ್ರೀ, ಹಿರಿಯ ಸಹಾಯಕಿ ಹಾಗೂ ಶ್ರೀ ಈ. ವೈ. ಕುಳಗೇರಿ, ದಲಾಯತ್ ಅವರುಗಳ ನಿಯೋಜನಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ಅಧಿಕೃತ ಜ್ಞಾಪನ ಸಂಖ್ಯೆ:ಸಂಕಇ 31 ಕೆಓಎಲ್ 2005 ದಿನಾಂಕ:27.7.2005.
2. ಅ.ಟಿ. ಸಂಖ್ಯೆ:ಸಂಕಇ 39 ಕೆಓಎಲ್ 2004 ದಿನಾಂಕ:7.1.2005.
3. ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರ ಪತ್ರದ ಸಂಖ್ಯೆ:ಕಅಪ್ರಾ/ಕಾ/8/2004-05 ದಿನಾಂಕ:16.3.2006.

**ಪ್ರಸ್ತಾವನೆ:**

ಕನ್ನಡ ಅಭಿವೃದ್ಧಿ ಪ್ರಾಧಿಕಾರದಲ್ಲಿ ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆಯಿಂದ ಪ್ರತಿನಿಯೋಜನೆ ಮೇಲೆ ಹಿರಿಯ ಸಹಾಯಕ ಆಗಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಬಿ.ಎನ್. ಜಯಶ್ರೀ ಹಾಗೂ ಕರ್ನಾಟಕ ವಿಧಾನಸಭೆ ಸಚಿವಾಲಯದಿಂದ ಪ್ರತಿ ನಿಯೋಜನೆ ಮೇಲೆ ದಲಾಯತ್ ಆಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಈ.ವೈ.ಕುಳಗೇರಿ ಅವರ ನಿಯೋಜನಾ ಅವಧಿಯನ್ನು ಮೇಲೆ (1) ಮತ್ತು (2) ರಲ್ಲಿ ಓದಲಾದ ದಿನಾಂಕ: 27.7.2005, 7.1.2005ರ ಅಧಿಕೃತ ಜ್ಞಾಪನ/ಅನಧಿಕೃತ ಟಿಪ್ಪಣಿಗಳಲ್ಲಿ ಒಂದು ವರ್ಷದ ಅವಧಿಗೆ ವಿಸ್ತರಿಸಲಾಗಿತ್ತು. ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರು ಮೇಲೆ (3)ರಲ್ಲಿ ಓದಲಾದ ದಿನಾಂಕ:16.3.2006ರ ಪತ್ರದಲ್ಲಿ ಶ್ರೀಮತಿ ಬಿ.ಎನ್. ಜಯಶ್ರೀ, ಹಿರಿಯ ಸಹಾಯಕಿ ಅವರ ನಿಯೋಜನಾ ಅವಧಿಯನ್ನು ದಿನಾಂಕ:7.5.2006ರಿಂದಲೂ ಶ್ರೀ ಈ.ವೈ.ಕುಳಗೇರಿ ದಲಾಯತ್‌ರ ನಿಯೋಜನಾ ಅವಧಿಯನ್ನು ದಿನಾಂಕ:21.9.2006ರಿಂದಲೂ ಒಂದು ವರ್ಷದ ಅವಧಿಗೆ ವಿಸ್ತರಿಸಲು ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಂಕಇ 21 ಕೆಓಎಲ್ 2006, ಬೆಂಗಳೂರು, ದಿನಾಂಕ:11ನೇ ಜುಲೈ 2006**

ಸರ್ಕಾರವು ಕನ್ನಡ ಅಭಿವೃದ್ಧಿ ಪ್ರಾಧಿಕಾರದಲ್ಲಿ ಪ್ರತಿ ನಿಯೋಜನೆ ಮೇಲಿರುವ ಶ್ರೀಮತಿ ಬಿ.ಎನ್. ಜಯಶ್ರೀ, ಹಿರಿಯ ಸಹಾಯಕಿ ಅವರ ನಿಯೋಜನಾ ಅವಧಿಯನ್ನು ದಿನಾಂಕ:7.5.2006ರಿಂದ ಒಂದು ವರ್ಷದ ಅವಧಿಯಗೆ ಹಾಗೂ ಶ್ರೀ ಈ.ವೈ. ಕುಳಗೇರಿ, ದಲಾಯತ್ ಅವರ ನಿಯೋಜನಾ ಅವಧಿಯನ್ನು ದಿನಾಂಕ:21.9.2006ರಿಂದ ಒಂದು ವರ್ಷದ ಅವಧಿಗೆ ವಿಸ್ತರಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1084

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ,

ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ. (ಆಡಳಿತ ಕನ್ನಡ)

**ವಿಷಯ:** ಉಪನಿರ್ದೇಶಕರ ಕಛೇರಿ, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು ಕಛೇರಿಯ ಕಛೇರಿ ಅಧೀಕ್ಷಕರ ಹುದ್ದೆಯನ್ನು ದಿನಾಂಕ:1.4.2006ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಸಂಕಇ 69 ಸ್ವೀಮರ 2005 ದಿನಾಂಕ:27.7.2005
2. ಆಯುಕ್ತರು, ಪರಂಪರೆ ಇಲಾಖೆ ಇವರ ಪತ್ರ ಸಂಖ್ಯೆ ಆಪ್ರಾಸಂಪ:ಹುದ್ದೆ:ಮುಂದುವರಿಕೆ:2005-06 ದಿನಾಂಕ: 23.3.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಪ್ರಾಚ್ಯವಸ್ತು, ಸಂಗ್ರಹಾಲಗಳು ಮತ್ತು ಪರಂಪರೆ ಇಲಾಖೆಗೆ 2005-06ನೇ ಸಾಲಿನಲ್ಲಿ ಹೊಸ ಘಟಕಗಳಿಗೆ ಮಂಜೂರಾತಿ ನೀಡಲಾಗಿದ್ದು ಸದರಿ ಆದೇಶದಲ್ಲಿ ವೇತನ ಶ್ರೇಣಿ ರೂ. 5200-9580ರಲ್ಲಿ ಒಂದು ಕಛೇರಿ ಅಧೀಕ್ಷಕರ ಹುದ್ದೆಯನ್ನು ಸೃಜಿಸಲು ಮತ್ತು ಸದರಿ ಹುದ್ದೆಯನ್ನು ದಿನಾಂಕ:31.3.2006 ರವರೆಗೆ ಮುಂದುವರಿಸಲು ಮಂಜೂರು ನೀಡಲಾಗಿತ್ತು.

ಮೇಲೆ ಓದಲಾದ (2)ರ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಅವರ ಪತ್ರದಲ್ಲಿ ಸದರಿ ಆದೇಶದಲ್ಲಿ ಸೃಜಿಸಲಾದ ಕಛೇರಿ ಅಧೀಕ್ಷಕ ಹುದ್ದೆಯನ್ನು ಮೈಸೂರಿನಲ್ಲಿರುವ ಉಪನಿರ್ದೇಶಕರ ಕಛೇರಿಯಲ್ಲಿ ಆಡಳಿತಾತ್ಮಕ ಹಿತದೃಷ್ಟಿಯಿಂದ ಹಾಗೂ ಅವಶ್ಯಕತೆಗನುಗುಣವಾಗಿ 1.4.2006ರಿಂದ ಇನ್ನು ಒಂದು ವರ್ಷದ ಅವಧಿಗೆ ಮುಂದುವರಿಸಲು ಸರ್ಕಾರದ ಆದೇಶವನ್ನು ಕೋರಿರುತ್ತಾರೆ.ಆಯುಕ್ತರವರ ಕೋರಿಕೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಂಕಇ 60 ಕೆಎಂಯು 2006, ಬೆಂಗಳೂರು, ದಿನಾಂಕ:12ನೇ ಜುಲೈ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಮೈಸೂರಿನ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಉಪ ನಿರ್ದೇಶಕರ ಕಛೇರಿಯಲ್ಲಿ, ಸೃಜಿಸಲಾಗಿರುವ ಕಛೇರಿ ಅಧೀಕ್ಷಕರ ಹುದ್ದೆಯನ್ನು ದಿನಾಂಕ:1.4.2006ರಿಂದ 31.3.2007ರ ವರೆಗೆ ಮುಂದುವರಿಸಲಾಗಿದೆ.

ಇದರ ವೆಚ್ಚವನ್ನು ಲೆಕ್ಕ ಶೀರ್ಷಿಕೆ:2205-00-1030-21 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಟಿಪ್ಪಣಿ ಸಂಖ್ಯೆ ಇಡಿ 395 ಐಎಫ್ (ಬಿಎ) 2006 ದಿನಾಂಕ:11.5.2006ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಾಂಬಶಿವಂ**

ಪಿ.ಆರ್. 1085 ಪೀಠಾಧಿಕಾರಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ. (ಆಡಳಿತ ಕನ್ನಡ)

## FOREST ECOLOGY AND ENVIRONMENT SECRETARIAT

**Sub:** Transfer of lease to investors/ power producers in respect of diversion of 69.971ha. of forest land in favour of M/s Suzlon Energy Limited for establishment of 65 MW WInd Power Project in Sogi RF and Sogi South (Jajikal Gudda) RF in Davanagere District of Karnataka.

**Read:**
1. Letter No. F. No. 8-96/2004-FC, dated :4.5.2005 of Government of India, Ministry of Environment and Forests, New Delhi..
2. Government Order No. FEE 165 FIl 2004, dated: 15.6.2005.
3. Letter No. A5 (5) GFL.Wind Farm.CR. 4/04-05,DATED: 31.1.2006 of the Principal Chief Conservator of Forests, Bangalore.
4. State Government letter No. fee 32 FLL 2006, dated 15.2.2006.
5. Letter No. F.No. 8-96-2004-fc, dated:14.6.2006 of Government of India, Ministry of Environment and Forests, New Delhi.

**PREAMBLE:**

Government of India in its letter read at (1) above has accorded approval under Forest (Conservation) Act, 1980 for diversion of 69.971 ha. of forest land in Sogi RF and Sogi South (Jajikal Gudda) RF in Davanagere District for establishing 65 MW Wind Power project in favour of M/s. Suzlon Energy Ltd., Bangalore subject to certain conditions.Accordingly, in G.O. dated :15.6.2005 read at (2) above sanction has been accorded for diversion of the said land in favour in favour of M/s Suzlon Energy Ltd., Bangalore subject to certain conditions.

The Principal Chief Conservator of Forests, Bangalore vide his letter dated :31.1.2006 read at (3) above has submitted proposal to obtain the approval of Government of India for Transferlease of forest lands diverted for establishment of Wind Power Project as per the Government of India guidelines dated:14.5.2004 issued under Forest (Conservation) Act, 1980 clarified vide letter dated :6.4.2005 to the following New User Agencies i.e. investor/Power Producers.

| Sl. No. | Name of the new User Agency (investors/Power producers) to whom lease is to be transferred | MW to be transferred. | Forest land to be transferred out of approved arca (in ha.) |
|---|---|---|---|
| 1. | M/s Ramghad Minerals and Mining Private Limited, Hospet, Bellary, Karnataka. | 23x 1250 MW WTGs=28.75 MW<br>8x1250 KW WTGS=10 MW | 35.63 ha. out of 61.961 ha. approved area in Sogi South (Jajikalgudda) RF 5.34 ha. out of 8.01 ha. approved area in sogi RF. |
| 2. | M/s P. Venganna Shetty and Brothers, Hospet, Bellary. Karnataka. | 3x1250 KW =3.75 MW | 2.00 ha. out of 8.01 ha. approved area in Sogi RF |
| 3. | M/sMSPI, Limited, Mumbai | 1x1250 KW=1.25 MW<br>17X1250 KW-21.25 MW | 0.67 ha out of 8.01 ha approved area in Sogi RF.<br>26. 33 ha. out of 61.961 ha approved area in Sogi South (Jajikagudda) RF. |

The Original user agency M/s Suzlon Energy Ltd., Bangalore has proposed to transfer entire leased out forest land i.e., 69. 971 ha. among the three new user agencies. The original user agency has submitted N.O.C. for such transfer and new agencies have submitted an under taking that they will abide by the conditions stipulated by Goverment of India and Government of Karnataka.

Accordingly the proposal was recommended to Government of India vide State Government letter dated 15.2.2006 read at (4) above.

Government of India Ministery of Environment and Forests, New Delhi vide their letter dated 14.6.2006 read at (5) above has conveyed its approval for transfer of lease from M/s Suzlon Energy Limited, the Original user agency to new User Agencies i.e., investors /power producers, subject to certain conditions.

The proposal has been examined in detail and hence the order.

**Government Order No. FEE 32 FLL 2006, Bangalore Dated:18th July 2006**

In the circumstances explained above Government are Pleased to accord saction under Section 2 of Forest (Conservation) Act, 1980 for transfer of lease from M/s Suzlon Energy Limited , the original User Agency, to the new User Agencies i. e., the investors /power producers indicated below:

| Sl. No. | Name of the new User Agency (investors/Power producers) to whom lease is to be transferred | MW to be transferred. | Forest land to be transferred out of approved arca (in ha.) |
|---|---|---|---|
| 1. | M/s Ramghad Minerals and Mining Private Limited, Hospet, Bellary, Karnataka. | 23x 1250 MW<br>WTGs=28.75 MW<br>8x1250 KW<br>WTGs=10 MW | 35.63 ha. out of 61.961 ha. approved area in Sogi South (Jajikalgudda) RF.<br>5.34 ha. out of 8.01 ha., approved area in Sogi RF. |
| 2. | M/s P. Venganna Shetty and Brothers, Hospet, Bellary. Karnataka. | 3x1250 KW =3.75 MW | 2.00 ha. out of 8.01 ha. approved area in Sogi RF |
| 3. | M/sMSPI, Limited, Mumbai | 1x1250 KW=1.25 MW<br>17X1250 KW-21.25 MW | 0.67 ha out of 8.01 ha approved area in Sogi RF.<br>26. 33 HA. out of 61.961 ha approved area in Sogi South (Jajikagudda) RF. |

The transfer of lease is subject to the condition that the new User Agencies, i.e., the investors/power producers, shall abide by all the conditions imposed by the Central Government /State Government /Principal Chief Conservator of Forests for diversion of 69.991 ha of forest land in favour of M/s Suzlon Energy Limited for establishment of 65 MW Wind Power Project in Sogi RF and South (Jajikal Gudda) RF in Davanagere District.

By Order and in the name of the Governor of Karnataka,

**S.R. VATSALA**

Under Secretary to Government,

Forest, Ecology and Environment Department.

P.R. 1087

## ಲೋಕೋಪಯೋಗಿ ಸಚಿವಾಲಯ

**ಸರ್ಕಾರಿ ಆದೇಶ ಸಂಖ್ಯೆ: ಲೋಇ 11 ಪಿಡಬ್ಲ್ಯುಸಿ 2006, ಬೆಂಗಳೂರು, ದಿನಾಂಕ: 15ನೇ ಜುಲೈ 2006**

**ವಿಷಯ:** ಶ್ರೀ ಶಿವಕುಮಾರ್ ತಂದೆ ಮಾಧವರಾವ್ ತಲವಾಡೆ, ಪದವೀಧರ ಇಂಜಿನಿಯರ್ (ಎಂ.ಆರ್.ಇ)ಇವರ ಸೇವೆಯನ್ನು ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:13:ಎಸ್‌ಎಲ್‌ಸಿ :94 ದಿನಾಂಕ:29.9.94.
2. ಸರ್ಕಾರದ ಪತ್ರ ಸಂಖ್ಯೆ:ಪಿಡಬ್ಲ್ಯೂಡಿ 201 ಪಿಡಬ್ಲ್ಯೂಸಿ 95, ದಿನಾಂಕ:2.7.94, 1.9.95 ಮತ್ತು 13.9.95.
3. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 17 ಸೇಸ್ಥಅ 94 ದಿ:20.10.94.
4. ಸರ್ಕಾರದ ಆದೇಶ ಸಂಖ್ಯೆ:ಡಿಪಿಎಆರ್ 2 ಎಸ್ ಎಲ್ ಸಿ 90 ದಿನಾಂಕ:6.8.90.
5. ಸರ್ಕಾರದ ಆದೇಶ ಸಂಖ್ಯೆ:ಲೋಇ 29 ಪಿಡ್ಬ್ಯೂಸಿ 2000, ದಿನಾಂಕ:28.4.2003.
6. ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಇಂ:ಪಂರಾಇಂಇ:ಸಿ-14ಎ:2005-06:6448:ದಿನಾಂಕ:21.1.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1) ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ:737:90, 738:90, 1038:90 ಮತ್ತು 297:91 ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ:1.7.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ಸಿ.ಆ.ಸು. ಇಲಾಖೆಯ ಆದೇಶಾನುಸಾರ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ:1.7.84 ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ ಇಂಜಿನಿಯರ್‌ರನ್ನು ದಿನಾಂಕ:29.9.94ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ:29.9.94ರ ಆದೇಶದಲ್ಲಿನ ಕಂಡಿಕೆ 6 ಮತ್ತು 7ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಪದವೀಧರ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದಲೂ ಹಾಗೂ ಡಿಪ್ಲೋಮಾ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಆಯಾ ಮುಖ್ಯ ಇಂಜಿನಿಯರ್‌ರವರು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ಪತ್ರಗಳಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ ಇಂಜಿನಿಯರ್‌ಗಳನ್ನು ಕೋರಲಾಗಿದೆ.

ಅದರಂತೆ ಕ್ರಮ ಸಂಖ್ಯೆ: (6) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಿಆಸು ಇಲಾಖೆಯ ಸಂಖ್ಯೆ: ಡಿ.ಪಿಎಆರ್:13:ಎಸ್‌ಎಲ್‌ಸಿ 94 ದಿನಾಂಕ 29.9.94 ಹಾಗೂ ಲೋಇ 29 ಪಿಡಬ್ಲುಸಿ 2000 ದಿನಾಂಕ:28.4.2003ರ ಆದೇಶದನ್ವಯ ಮಾಸಿಕ ವೇತನದಡಿಯಲ್ಲಿ ಕೆಲಸ ಮಾಡುತ್ತಿರುವ ಪದವೀಧರ ಇಂಜಿನಿಯರ್‌ರನ್ನು ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಗಳಲ್ಲಿ ದಿನಾಂಕ:1.7.84ರ ನಂತರ ಹಾಗೂ 15.10.92ಕ್ಕೆ ಮುಂಚೆ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ:29.9.94ರ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಈ ಕೆಳಕಂಡ ಪದವೀಧರ ಇಂಜಿನಿಯರ್‌ರವರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕ ಅಂದರೆ 16.9.2005ರಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| | ಹೆಸರು ಶ್ರೀಯುತರು | ದಿನಗೂಲಿಗೆ ಸೇರಿದ ದಿನಾಂಕ | ಬಿ.ಇ. ಪಾಸು ಮಾಡಿದ ದಿನಾಂಕ | 10 ವರ್ಷ ಸೇವೆ ಪೂರೈಸುವ ದಿನಾಂಕ | ಕ್ರಮಬದ್ಧ ಗೊಳ್ಳುವ ದಿನಾಂಕ | ಕಾರ್ಯನಿರ್ವಹಿಸುತ್ತಿರುವ ಸ್ಥಳ |
|---|---|---|---|---|---|---|
| 1. | ಶ್ರೀ ಶಿವಕುಮಾರ್, ತಂದೆ ಮಾಧವರಾವ್ ತಲವಾಡೆ, ಪದವೀಧರ ಇಂಜಿನಿಯರ್ | 20.5.92 | ಡಿಸೆಂಬರ್ 88 | 16.9.2005 (ದಿನಗೂಲಿ ಕೆಲಸಕ್ಕೆ ಗೈರು ಹಾಜರಾದ ಅವಧಿಯನ್ನು ಹೊರತುಪಡಿಸಿದೆ) | 16.9.05 | ಪಂಚಾಯತ್ ರಾಜ್ ಉಪ ವಿಭಾಗ, ಭಾಲ್ಕಿ |

ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ ಮೇಲ್ಕಂಡ ಸಹಾಯಕ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರು ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರಲ್ಲಿ ಕಾರ್ಯವರದಿ ಮಾಡುವುದು.

ಈ ಆದೇಶವನ್ನು ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ:29.9.94 ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟರಸಪ್ಪ**

ಪಿ.ಆರ್. 1088

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ. (ಸೇವೆಗಳು-ಸಿ)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಪರಿಷ್ಕೃತ-1) ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ವನಇ 424 ಟಿಟಿಪಿ,1989ದಿ:18.9.1991.
2. ಆಯುಕ್ತರು,ನಗರಾಭಿವೃದ್ಧಿ ಪ್ರಾಧಿಕಾರ, ಚಿತ್ರದುರ್ಗ ಇವರ ಪತ್ರ ಸಂಖ್ಯೆ:ಚಿನಪ್ರಾ: ಡಿಇವಿ:24: ಮಯೋಪ-1: 2006-07 , ದಿನಾಂಕ:25.4.2006.
3. ನಿರ್ದೇಶಕರು, ನಗರ ಯೋಜನಾ ಇಲಾಖೆ, ಬೆಂಗಳೂರು ಇವರ ಏತ ಕಡತ ಸಂಖ್ಯೆ:ನಯೋ/ಉನಿ/(ಕೇಂ.ಕಾ)13 ಮ.ಯೋ. (ತಾ) ಚಿತ್ರದುರ್ಗ/513:2006-07, ದಿನಾಂಕ:15.6.2006.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಚಿತ್ರದುರ್ಗ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ವ್ಯಾಪಕಾಭಿವೃದ್ಧಿ ಯೋಜನೆ) ಅಂತಿಮ ಅನುಮೋದನೆ ನೀಡಲಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ ಚಿತ್ರದುರ್ಗ ಇವರ ಚಿತ್ರದುರ್ಗ ನಗರದ ಸ್ಥಳೀಯ ಯೋಜನಾ ದೇಶದ ಮಹಾ ಯೋಜನಾ ಪರಿಷ್ಕೃತ-1ರ ನಕ್ಷೆ ಹಾಗೂ ವರದಿಯನ್ನು ತಯಾರಿಸಿ ನಗರ ಯೋಜನಾ ನಿರ್ದೇಶಕರ ಮುಖಾಂತರ ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ಸಲ್ಲಿಸಿರುತ್ತಾರೆ.

2001ರ ಜನಗಣತಿಯಂತೆ ಚಿತ್ರದುರ್ಗ ನಗರದ ಜನಸಂಖ್ಯೆ 1,25,170 ಇದ್ದು, 20 ವರ್ಷಗಳ ಅವಧಿಗೆ ಅಂದರೆ, 2021 ರ ವೇಳೆಗೆ ಜನಸಂಖ್ಯೆಯು 2,00,000 ಆಗಬಹುದೆಂದು ಅಂದಾಜಿಸಿ, ಮಹಾ ಯೋಜನೆಯನ್ನು ರೂಪಿಸಲಾಗಿದೆ. ಚಿತ್ರದುರ್ಗ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯು ವಿಸ್ತೀರ್ಣ 13123.40 ಹೆಕ್ಟೇರ್ ಇದ್ದು ನಗರೀಕರಣ ಎಲ್ಲೆಯು 2683,16 ಹೆಕ್ಟೇರ್ ಇರುತ್ತದೆ. ಚಿತ್ರದುರ್ಗ ನಗರದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹವಾಗುಣ, ರಸ್ತೆಗಳ ಹಾಲಿ ಪರಿಚಲನಾ ವ್ಯವಸ್ಥೆಯ ಸಮಸ್ಯೆ, ನಗರದ ಬೆಳವಣಿಗೆಯ ದಿಕ್ಕು ಇತ್ಯಾದಿಗಳನ್ನು ವಿಶ್ಲೇಷಿಸಿ, ಯೋಜನಾ ತತ್ವ ಹಾಗೂ ಮಹಾ ಯೋಜನೆ ತಯಾರಿಕೆ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961, ಪ್ರಕರಣ (12)ರಲ್ಲಿ ನಿಗಧಿಪಡಿಸಿರುವ ಅಂಶಗಳನ್ನು ಪರಿಗಣಿಸಿ, ನಗರದ ಮುಂದಿನ ಬೆಳವಣಿಗೆಗೆ/ ವಿವಿಧ ಉಪಯೋಗಗಳಿಗೆ ಬೇಕಾಗಬಹುದಾದ ಜಾಗಗಳನ್ನು ಕಾಯ್ದಿರಿಸಿ, ನಗರೀಕರಣ ಎಲ್ಲೆಯನ್ನು ನಿಗಧಿಪಡಿಸಿ, ಮಹಾ ಯೋಜನೆಯನ್ನು ತಯಾರಿಸಲಾಗಿದೆ ಎಂದು ತಿಳಿಸುತ್ತಾ, ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(1)ರನ್ವಯ ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವಂತೆ ನಗರ ಯೋಜನಾ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 78 ಬೆಂರೂಪ್ರಾ 2006, ಬೆಂಗಳೂರು, ದಿನಾಂಕ:12ನೇ ಜುಲೈ 2006**

ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ-1) ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(1)ರನ್ವಯ ಈ ಕೆಳಕಂಡ ನಿಬಂಧನೆಗೊಳಪಟ್ಟು ತಾತ್ಕಾಲಿಕ ಅನುಮೋದನೆ ನೀಡಲಾಗಿದೆ.

(i) ವಲಯ ನಿಯಮಾವಳಿಗಳಲ್ಲಿ ಗ್ರೂಪ್ ಹೌಸಿಂಗ್‌ಗೆ ಸಂಬಂಧಿಸಿದಂತೆ ವರದಿಯ ಟಿಪ್ಪಣಿ ಸಂಖ್ಯೆ. 5 (ಪುಟ ಸಂಖ್ಯೆ. 116)ಕ್ಕೆ ಕೆಳಕಂಡಂತೆ ತಿದ್ದುಪಡಿ ಮಾಡಿಕೊಳ್ಳುವುದು.

"5. C.A. sites reserved in the development plan shall be developed by the owner and finally handed over to the Residents Association of the project for maintenance"

ಚಿತ್ರದುರ್ಗ ನಗರದ ಮಹಾ ಯೋಜನೆ (ಪರಿಷ್ಕೃತ-1) ಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಮತ್ತು ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ವೈ. ಸಾಗರ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 1089

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಶಂಕರ್‌ಸಿಂಗ್, ಪಿಸಿ-608, 9ನೇ ಪಡೆ, ಕೆಎಸ್‌ಆರ್‌ಪಿ., ಬೆಂಗಳೂರು ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 9ನೇ ಪಡೆ, ಕೆಎಸ್‌ಆರ್‌ಪಿ., ಬೆಂಗಳೂರು ಇವರ ಆದೇಶ ಸಂಖ್ಯೆಇವಿ/ 1/16/2002-03 , ದಿನಾಂಕ:14.9.2004.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್‌ಆರ್‌ಪಿ., ಬೆಂಗಳೂರು ಇವರ ಆದೇಶ ಸಂಖ್ಯೆ ಅಪೀಲು/22/2004-05, ದಿನಾಂಕ:16.4.2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:5.7.2005.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆಅಪೀಲು/2/94/2005, ದಿನಾಂಕ:24.10.2005.
5. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆಪಿಎಸ್‌ಸಿ/41/CNS 2006, ದಿನಾಂಕ:14.6.2006.

**ಪ್ರಸ್ತಾವನೆ:**

ಶ್ರೀ ಶಂಕರ್‌ಸಿಂಗ್, ಪಿಸಿ-608, 9ನೇ ಪಡೆ, ಕೆಎಸ್‌ಆರ್‌ಪಿ., ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಪೇದೆ ಸಂಖ್ಯೆ:608, ಶಂಕರ್‌ಸಿಂಗ್, 'ಡಿ' ದಳ, 9ನೇ ಪಡೆ, ಕೆಎಸ್‌ಆರ್‌ಪಿ., ಬೆಂಗಳೂರು ಆದ ನೀವು ಬೇರೆ ಹುಡುಗಿಯನ್ನು ಇಟ್ಟುಕೊಂಡಿದ್ದು, ನಿಮ್ಮ ಹೆಂಡತಿ ಶ್ರೀಮತಿ ರಜನಿಬಾಯಿಗೆ ನೀವು ಹಾಗೂ ನಿಮ್ಮ ತಾಯಿ ಶ್ರೀಮತಿ ರತ್ನಾಬಾಯಿ ಹಾಗೂ ನಿಮ್ಮ ಸಹೋದರರಾದ ಶ್ರೀ ಧರ್ಮಸಿಂಗ್, ಶ್ರೀ ಹನುಮಾನ್ ಸಿಂಗ್ ಮತ್ತು ಶಾರಾದಾಬಾಯಿ ಎಂಬುವವರು ಮಾನಸಿಕವಾಗಿ ಹಾಗೂ ದೈಹಿಕವಾಗಿ ಹಿಂಸೆಯನ್ನು ನೀಡುತ್ತಿದ್ದುದರಿಂದ, ನಿಮ್ಮ ಪತ್ನಿಯು ಜೀವನದಲ್ಲಿ ಜಿಗುಪ್ಸೆಗೊಂಡು, ಬಾಪೂಜಿ ಸರ್ಕಲ್, ಕಾಡುಗೋಡಿ ಟೌನ್, ಸುಬ್ಬುಸಿಂಗ್ ಎಂಬುವವರ ಮನೆಯಲ್ಲಿ, ಬೆಡ್‌ರೂಮಿನ ಮೇಲ್ಛಾವಣಿಯ ಕಬ್ಬಿಣದ ಪೈಪ್‌ಗೆ ಮತ್ತು ತನ್ನ ಕುತ್ತಿಗೆಗೆ ಸೀರೆಯನ್ನು ಕಟ್ಟಿಕೊಂಡು, ದಿನಾಂಕ:26.11.2002ರಂದು ಸಾಯಂಕಾಲ 19-30 ಗಂಟೆ ಸಮಯದಲ್ಲಿ ಆತ್ಮಹತ್ಯೆ ಮಾಡಿಕೊಂಡಿರುತ್ತಾರೆ. ಈ ಪ್ರಯುಕ್ತ ಕಾಡುಗೋಡಿ ಪೊಲೀಸ್ ಠಾಣೆಯಲ್ಲಿ ನಿಮ್ಮ ವಿರುದ್ಧ ಅಪರಾಧ ಮೊಕದ್ದಮೆ ಸಂಖ್ಯೆ:171/2002ರಲ್ಲಿ ಭಾರತೀಯ ದಂಡ ಸಂಹಿತೆ ಕಲಂ 498 (ಎ) ಮತ್ತು 306 ರನ್ವಯ ಪ್ರಕರಣಗಳು ದಾಖಲಾಗಿದ್ದು, ನೀವು ತೀವ್ರ ಸ್ವರೂಪದ ದುರ್ನಡತೆಯನ್ನು ಪ್ರದರ್ಶಿಸಿರುವಿರಿ,"

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 9ನೇ ಪಡೆ, ಕೆಎಸ್ಆರ್‌ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:14.9.2004ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಪಿಸಿ ಹುದ್ದೆಯ ಕನಿಷ್ಠ ವೇತನಕ್ಕೆ ತಿಳಿಸಿ, ನಂತರದ ವಾರ್ಷಿಕ ವೇತನ ಬಡ್ತಿಗಳನ್ನು ಹೊಸದಾಗಿ ಗಳಿಸಲು ಹಾಗೂ ಗೈರುಹಾಜರಿ ಮತ್ತು ಕಾರಾಗೃಹದಲ್ಲಿ ಕಳೆದ ಅವಧಿಯನ್ನು ಸಂಬಳ ರಹಿತ ರಜೆ ಎಂದೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್ಆರ್‌ಪಿ., ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:16.4.2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ನ್ಯಾಯಾಲಯವು ಆಪಾದಿತ ನೌಕರರು ಅವರ ಪತ್ನಿಗೆ ಹಿಂಸೆ ನೀಡಿದ್ದರಿಂದ ಅವರ ಪತ್ನಿಯು ಆತ್ಮಹತ್ಯೆ ಮಾಡಿಕೊಂಡರೆಂಬ ಆರೋಪದಿಂದ ಮಾತ್ರ ಮುಕ್ತಗೊಳಿಸಿದ್ದು, ಆಪಾದಿತರು ಬೇರೆ ಸಂಬಂಧ ಹೊಂದಿದ್ದರೆಂಬ ಆರೋಪದಿಂದ ಅಲ್ಲ. ಈ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಂಡನಾದೇಶವು ಸೂಕ್ತವಾಗಿದ್ದರೂ, ಕೆಸಿಎಸ್ಆರ್‌ನ ನಿಯಮ 59 ರಲ್ಲಿನ ಉಪಬಂಧಗಳಿಗನುಸಾರ ಇಲ್ಲವಾದ್ದರಿಂದ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಕೆಳಕಂಡಂತೆ ಮಾರ್ಪಡಿಸಲು ಸರ್ಕಾರ ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಕೋರಲಾಗಿತ್ತು.

1. ಅರ್ಜಿದಾರರ ವೇತನವನ್ನು ಹುದ್ದೆಯ ಕನಿಷ್ಠ ವೇತನ ಮಟ್ಟಕ್ಕೆ 10(ಹತ್ತು) ವರ್ಷಗಳ ಅವಧಿಗೆ ಇಳಿಸಿ, ಈ ಅವಧಿಯಲ್ಲಿ ಅವರು ಯಾವುದೇ ವಾರ್ಷಿಕ ವೇತನ ಬಡ್ತಿ ಗಳಿಸಲು ಅರ್ಹರಲ್ಲವೆಂದೂ, ದಂಡನಾ ಅವಧಿಯ ನಂತರ ದಂಡನೆಯು ಚಾಲ್ತಿಗೆ ಬರುವ ಮುನ್ನಾ ದಿನಾಂಕದಂದು ಪಡೆಯುತ್ತಿದ್ದ ವೇತನಕ್ಕೆ ಮರು ನಿಗದಿಪಡಿಸಿ, ಅಲ್ಲಿಂದ ವಾರ್ಷಿಕ ವೇತನ ಬಡ್ತಿ ಗಳಿಸತಕ್ಕದ್ದು.

2. ಉಳಿದೆಲ್ಲಾ ಷರತ್ತುಗಳು ಶಿಸ್ತು ಪ್ರಾಧಿಕಾರಿಯ ಆದೇಶದಲ್ಲಿದ್ದಂತೆಯೇ ಮುಂದುವರಿಯುವುದು.

ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ: 14.6.2006ರ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 216 ಪೊಸಿಐ 2005, ಬೆಂಗಳೂರು, ದಿನಾಂಕ: 14ನೇ ಜುಲೈ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:14.9.2004ರ ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್ 9ನೇ ಪಡೆ, ಕೆಎಸ್ಆರ್‌ಪಿ., ಬೆಂಗಳೂರು ಇವರ ದಂಡನಾ ಆದೇಶವನ್ನು ಭಾಗಶಃ ಮಾರ್ಪಡಿಸಿ ಶ್ರೀ ಶಂಕರ್‌ಸಿಂಗ್, ಪಿಸಿ-608 9ನೇ ಪಡೆ, ಕೆಎಸ್ಆರ್‌ಪಿ., ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:5.7.2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

1. ಅರ್ಜಿದಾರರ ವೇತನವನ್ನು ಪಿಸಿ ಹುದ್ದೆಯ ಕನಿಷ್ಠ ವೇತನ ಮಟ್ಟಕ್ಕೆ ಹತ್ತು (10) ವರ್ಷಗಳ ಅವಧಿಗೆ ಇಳಿಸಿ, ಈ ಅವಧಿಯಲ್ಲಿ ಅವರು ಯಾವುದೇ ವಾರ್ಷಿಕ ವೇತನ ಬಡ್ತಿ ಗಳಿಸದಿರಲು, ಹಾಗೂ ದಂಡನಾ ಅವಧಿ ಮುಗಿದ ನಂತರ ದಂಡನೆಯು ಚಾಲ್ತಿಗೆ ಬರುವ ಮುನ್ನಾ ದಿನಾಂಕದಂದು ಪಡೆಯುತ್ತಿದ್ದ ವೇತನವನ್ನು ವೇತನಕ್ಕೆ ಮರುನಿಗದಿಪಡಿಸಿ, ಅಲ್ಲಿಂದ ವಾರ್ಷಿಕ ವೇತನ ಬಡ್ತಿಗಳಿಸತಕ್ಕದ್ದು.

2. ಉಳಿದೆಲ್ಲಾ ಅಂಶಗಳು/ಷರತ್ತುಗಳು ಶಿಸ್ತು ಪ್ರಾಧಿಕಾರಿಯ ಆದೇಶದಲ್ಲಿದ್ದಂತೆಯೇ ಮುಂದುವರಿಯುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:14.6.2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1100

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ರುದ್ರಸ್ವಾಮಿ, ಪಿಎಸ್ಐ, ಮದ್ದೂರು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ/ 2/ ಪಿಆರ್-25 / 2004-05, ಓಬಿ ಸಂಖ್ಯೆ:423/2004-05 , ದಿನಾಂಕ:28.2.2005.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ ಅಪೀಲು/12/2005-06, ದಿನಾಂಕ:23.9.2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:21.11.2005.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆಅಪೀಲು/2/147/2005, ದಿನಾಂಕ:18.3.3006.

**ಪ್ರಸ್ತಾವನೆ:**

ಶ್ರೀ ರುದ್ರಸ್ವಾಮಿ, ಪಿಎಸ್ಐ ಮದ್ದೂರು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

"ನೀವು ಮದ್ದೂರು ಪೊಲೀಸ್ ಠಾಣೆಯಲ್ಲಿ (ಅಪರಾಧ ವಿಭಾಗದಲ್ಲಿ) ಕರ್ತವ್ಯ ನಿರ್ವಹಿಸುತ್ತಿದ್ದು, ಚನ್ನಪಟ್ಟಣ ಗ್ರಾಮಾಂತರ ಪೊಲೀಸ್ ಠಾಣಾ ಮೊ.ಸಂ. 241:03 ಕಲಂ. 341-392 ಐಪಿಸಿ ಕೇಸಿನ ಕೃತ್ಯೆ ನಡೆದ ಸ್ಥಳದ ಆಧಾರದ ಮೇರೆಗೆ ಪ್ರಕರಣ ಕಡತವನ್ನು ಸಿಪಿಸಿ-1497 ರವರಿಂದ ದಿನಾಂಕ:5.1.2004ರಂದು ನೀವು ಪಡೆದುಕೊಂಡು ಮದ್ದೂರು ಠಾಣೆ ಮೊ.ಸಂ. 02-04 ಕಲಂ. 314-392 ಐಪಿಸಿ ಪ್ರಕರಣವನ್ನು ನೋಂದಾಯಿಸಿ ಪ್ರಕರಣದ ಕಡತ ಪಡೆದುಕೊಂಡಿದ್ದಕ್ಕೆ ಸ್ವೀಕೃತಿ ನೀಡಿ ಅದೇ ದಿವಸ ನೀವು ಸಂಜೆ 8-00 ಗಂಟೆಗೆ ಚನ್ನಪಟ್ಟಣ ಸಿಪಿಐ ಗ್ರಾಮಾಂತರ ಕಛೇರಿಗೆ ಹೋಗಿ ಬರಹಗಾರರಿಂದ ಸ್ವೀಕೃತಿ ನೀಡಿದ ಪ್ರತಿಯನ್ನು ದುರುದ್ದೇಶದಿಂದ ಪಡೆದುಕೊಂಡು ಪೆನ್ನಿನಿಂದ ತಿದ್ದಿರುವುದರ ಮೂಲಕ ಅತೀವ ಅಶಿಸ್ತು ಮತ್ತು ದುರ್ನಡತೆ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ28.2.2005 ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 6 ತಿಂಗಳ ಕಾಲ ವೇತನ ಬಡ್ತಿಗೆ ಯಾವುದೇ ಪರಿಣಾಮ ಬೀರದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:23.9.2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡು ಆದೇಶಗಳ ವಿರುದ್ದ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಈ ಪ್ರಕರಣವು ಸುಲಿಗೆಗೆ ಸಂಬಂಧಿಸಿದ್ದಾಗಿದ್ದು, ಇದು ಗಂಭೀರ ಸ್ವರೂಪದ್ದಾಗಿದ್ದು, ಯಾವುದೇ ಪೊಲೀಸ್ ಅಧಿಕಾರಿಯು ಇಂತಹ ಪ್ರಕರಣಗಳಲ್ಲಿ ತಕ್ಷಣ ಗಮನ ಹರಿಸಬೇಕಾದ ಅವಶ್ಯಕತೆ ಇರುತ್ತದೆ. ಅರ್ಜಿದಾರರು ತಮ್ಮ ಕರ್ತವ್ಯದಲ್ಲಿ ವಿಳಂಬ ಮಾಡಿರುವುದು, ದುರ್ನಡತೆ ಎಸಗಿರುವುದು ದಾಖಲಾತಿಗಳಿಂದ ಕಂಡುಬರುತ್ತಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷ್ಯತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 178 ಪೊಸೋಅ 2006, ಬೆಂಗಳೂರು, ದಿನಾಂಕ: 12ನೇ ಜುಲೈ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರುದ್ರಸ್ವಾಮಿ, ಪಿಎಸ್‌ಐ ಮದ್ದೂರು ಪೊಲೀಸ್ ಠಾಣೆ, (ಅಪರಾಧ) ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:21.11.2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1101

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು)

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಯಳಂದೂರು ತಾಲ್ಲೂಕ್ ಮಲ್ಲಹಳ್ಳಿ-ಕೆಸ್ತೂರು-ಕಿನಹಳ್ಳಿ ಅಗರ ರಸ್ತೆ ಸೇರುವ 1.60 ಕಿಮೀ ರವರೆಗೆ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ: ರಶಾ: ಸಇಂ: ಚಾ.ನಗರ: ಮೇಲ್ದರ್ಜೆ 2006-07 ದಿನಾಂಕ 9.5.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರುರವರು ಯಳಂದೂರು ತಾಲ್ಲೂಕ್ ಮಲ್ಲಹಳ್ಳಿ-ಕೆಸ್ತೂರು-ಕಿನಹಳ್ಳಿ ಅಗರ ರಸ್ತೆ ಸೇರುವ 1.60 ಕಿಮಿ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 107 ಸಿಆರ್‌ಎಂ 2006, ಬೆಂಗಳೂರು, ದಿನಾಂಕ: 24ನೇ ಜುಲೈ 2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಯಳಂದೂರು ತಾಲ್ಲೂಕ್ ಮಲ್ಲಹಳ್ಳಿ-ಕೆಸ್ತೂರು-ಕಿನಹಳ್ಳಿ ಅಗರ ರಸ್ತೆ ಸೇರುವ 1.60 ಕಿಮೀ ಗ್ರಾಮೀಣ ರಸ್ತೆಯನ್ನು, ಕೊಳ್ಳೇಗಾಲ ವಿಧಾನಸಭಾ ಕ್ಷೇತ್ರಕ್ಕೆ ಮೀಸಲಿರಿಸಿದ 50.00 ಕಿಮೀ. ರಸ್ತೆಯ ಪರಿಮಿತಿಯಲ್ಲಿ ಸೇರಿರುವ ಷರತ್ತಿಗೊಳಪಟ್ಟು 1.60 ಕಿಮೀ. ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1124

**ಎಸ್.ಜಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಯೋಜನೆಯಲ್ಲಿ ಮಂಜೂರಾದ ಸಮುದಾಯ ಭವನದ ಕಟ್ಟಡ ಕಾಮಗಾರಿಯಲ್ಲಿನ ಹಣದ ದುರುಪಯೋಗಕ್ಕೆ ಕಾರಣರಾದ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆ - ದಂಡನೆ ವಿಧಿಸಿ ಬಗ್ಗೆ ಆದೇಶ.

**ಓದಲಾಗಿದೆ:**
1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ಪತ್ರ ಸಂಖ್ಯೆ: ಜಿಪಂಗು:ಅಭಿ: ಹೈ.ಕ.ಮಂ:2001-02, ದಿ:9.9.02.
2. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಗ್ರಾಅಪ 4 ಇಎನ್‌ಕ್ಯೂ 02, ದಿ: 28.11.02.
3. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ಪತ್ರ ಸಂಖ್ಯೆ: ಜಿಪಂಗು:ಅಭಿ: ಹೈ.ಕ.ಮಂ:2001-02, ದಿ:3.1.03.
4. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 4 ಇಎನ್‌ಕ್ಯೂ 02, ದಿ. 18.2.03.
5. ವಿಚಾರಣಾಧಿಕಾರಿಯವರ ವರದಿ ಸಂಖ್ಯೆ. ಜಿಪಂಗು:ಅಭಿ:ಹೈ.ಕ.ಮಂ:ಹ.ಬಿ:01-02, ದಿ.31.10.03.
6. ಸರ್ಕಾರದ 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ. ಗ್ರಾಅಪ 4 ಇಎನ್‌ಕ್ಯೂ 02, ದಿ. 1.12.03.

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಅಫಜಲಪೂರ ತಾಲ್ಲೂಕು, ಉಪ್ಪರವಾಡಿ ಗ್ರಾಮಕ್ಕೆ ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಯೋಜನೆಯಲ್ಲಿ ಮಂಜೂರಾದ ಸಮುದಾಯ ಭವನ ಕಟ್ಟಡದ ಕಾಮಗಾರಿಯಲ್ಲಿ ನಡೆದಿರುವ ರೂ. 94,665-00 ಗಳ ಅವ್ಯವಹಾರಕ್ಕೆ ಕಾರಣರಾದ ಶ್ರೀ ಬಸವರಾಜ ಸಲಗರ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಶ್ರೀ ಶರಣಬಸಪ್ಪ, ಸಹಾಯಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಅಫಜಲಪೂರ ಇವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಕರಡು ದೋಷಾರೋಪಣೆ ಪಟ್ಟಿಯೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಶ್ರೀ ಬಸವರಾಜ ಸಲಗರ, ಹಿಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಅಫಜಲಪುರ ಮತ್ತು ಶ್ರೀ ಶರಣಬಸಪ್ಪ, ಸಹಾಯಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಅಫಜಲಪೂರ ಇವರ ಮೇಲೆ ಕರ್ನಾಟಕ ನಾಗರೀಕ ಸೇವಾ (ವ.ನಿ.ಮೇ.) ನಿಯಮಾವಳಿಗಳ 1957ರ ನಿಯಮ-11ರ ರೀತ್ಯಾ ಜಂಟಿ ಇಲಾಖಾ ವಿಚಾರಣೆ ಹೂಡಲು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿ.28.11.2002ರ ಕಾರಣ ಕೇಳುವ ನೋಟೀಸಿನೊಂದಿಗೆ ಆರೋಪ ಪಟ್ಟಿ ಜಾರಿ ಮಾಡಲಾಗಿತ್ತು. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಆಪಾದಿತರು ಸಲ್ಲಿಸಿರುವ ಲಿಖಿತ ಹೇಳಿಕೆಗಳನ್ನು ಲಗತ್ತಿಸಿ ಕಳುಹಿಸಿದ್ದು ಅವುಗಳನ್ನು ಪರಿಶೀಲಿಸಲಾಗಿ ಸಮರ್ಪಕವಾಗಿಲ್ಲವೆಂದು ಕಂಡು ಬಂದಿರುವುದರಿಂದ ಮತ್ತು ಆಪಾದಿತ ಅಧಿಕಾರಿಗಳು ದುರ್ನಡತೆಯನ್ನೆಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡು ಬಂದಿದ್ದರಿಂದ, ಆಪಾದಿತರ ಮೇಲಿನ ಆಪಾದನೆಗಳ ಬಗ್ಗೆ ಸತ್ಯಾಂಶವನ್ನರಿಯಲು ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಸರ್ಕಾರಿ ಆದೇಶ ದಿ:18.2.03ರಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಮತ್ತು ಉಪ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಯವರು ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ದಿ. 31.10.03ರಲ್ಲಿ ವಿಚಾರಣಾ ವರದಿ ಸಲ್ಲಿಸಿರುತ್ತಾರೆ. ಅದರಲ್ಲಿ ಶ್ರೀ ಬಸವರಾಜ ಸಲಗರ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಹಾಗೂ ಶ್ರೀ ಶರಣಬಸಪ್ಪ, ಸಹಾಯಕ ಇಂಜಿನಿಯರ್ ಇವರುಗಳು ಸಾರ್ವಜನಿಕರ ವಂತಿಗೆಯಿಂದ ಕಟ್ಟಿದ ಮಹಾರಾಜ ಮಂದಿರದ ಅಳತೆಗಳನ್ನು ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ ಯೋಜನೆಯಡಿಯಲ್ಲಿ ಮಂಜೂರಾದ ಸಮುದಾಯ ಭವನದ ಅಳತೆಗಳೆಂದು ನಮೂದಿಸಿರುತ್ತಾರೆ. ಸದರಿಯವರ ಮೇಲೆ ಇಲಾಖಾ ವಿಚಾರಣೆ ಪ್ರಾರಂಭಿಸಿರುವುದರಿಂದ ಸಾರ್ವಜನಿಕರ ವಂತಿಗೆ ಹಣವನ್ನು ಸಂಗ್ರಹಿಸಿ ಸಮುದಾಯ ಭವನ ಕಟ್ಟಿರುವುದು ನಿಜವಿರುತ್ತದೆ ಎಂದು ವರದಿ ಮಾಡಿರುತ್ತಾರೆ. ಸದರಿ ಇಲಾಖಾ ವಿಚಾರಣೆಯ ವರದಿಯನ್ನು ಆಪಾದಿತರಿಗೆ ಕಳುಹಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ದಿ. 1.12.03ರಲ್ಲಿ 2ನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ಆಪಾದಿತರು ಲಿಖಿತ ಹೇಳಿಕೆ ಸಲ್ಲಿಸಿ ತಾವು ಯಾವುದೇ ಅವ್ಯವಹಾರ ಎಸಗಿಲ್ಲವೆಂದು ತಿಳಿಸಿರುತ್ತಾರೆ.

ವಿಚಾರಣಾಧಿಕಾರಿಯವರ ವರದಿ ಹಾಗೂ ಆಪಾದಿತರ ಲಿಖಿತ ಹೇಳಿಕೆಗಳನ್ನು ಪರಿಶೀಲಿಸಲಾಗಿ ಆಪಾದಿತರು ಸಾರ್ವಜನಿಕರ ವಂತಿಗೆಯಿಂದ ಕಟ್ಟಿದ ಮಹಾರಾಜ ಮಂದಿರದ ಅಳತೆಗಳನ್ನು ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ ಯೋಜನೆಯಡಿಯಲ್ಲಿ ಮಂಜೂರಾದ ಸಮುದಾಯ ಭವನದ ಅಳತೆಗಳೆಂದು ನಮೂದಿಸಿರುತ್ತಾರೆ. ಸದರಿಯವರ ಮೇಲೆ ಇಲಾಖಾ ವಿಚಾರಣೆ ಪ್ರಾರಂಭಿಸಿರುವುದರಿಂದ ಮತ್ತೊಂದು ಸಮುದಾಯ ಭವನ ಕಟ್ಟಿರುವುದು ನಿಜವಿರುತ್ತದೆ ಎಂದು ವರದಿ ಮಾಡಿರುವುದರಿಂದ ಆಪಾದಿತರ ವಿರುದ್ಧ ಮಾಡಲಾದ ಆಪಾದನೆಗಳು ಸಾಬೀತಾಗಿರುತ್ತವೆ. ಆದುದರಿಂದ ಸರ್ಕಾರವು ಆಪಾದಿತರ ವಿರುದ್ಧ ದಂಡನೆ ವಿಧಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 4 ಇಎನ್‌ಕ್ಯೂ 02, ಬೆಂಗಳೂರು, ದಿನಾಂಕ: 6ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಶ್ರೀ ಬಸವರಾಜ ಸಲಗರ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಶರಣಬಸಪ್ಪ, ಅಂದಿನ ಸಹಾಯಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯಿಂಗ್ ಉಪ ವಿಭಾಗ, ಅಫಜಲಪೂರ ಇವರುಗಳ ಮೇಲೆ ಸಾಬೀತಾದ ಆರೋಪಗಳಿಗಾಗಿ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳ ನಿಯಮ 8(iii) ರಂತೆ ಅವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮದೊಂದಿಗೆ (ಶಾಶ್ವತವಾಗಿ) ತಡೆಹಿಡಿಯುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್. 1122

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.